KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಏಪ್ರಿಲ್ ೮, ೨೦೧೦ (ಚೈತ್ರ ೧೮, ಶಕ ವರ್ಷ ೧೯೩೨) | ಸಂಚಿಕೆ ೧೪ |
| --- | --- | --- |

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2030 ಮುದ್ರಾಂಕ ಮತ್ತು ನೋಂದಣಿ ಅಡಿಯಲ್ಲಿ ಪುನರ್ ವಿನಿಯೋಗ ಮಾಡುವ ಕುರಿತು.

**ಓದಲಾಗಿದೆ :** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ : ಬಿಯುಡಿ/28/2009–10 ದಿನಾಂಕ : 21–12–2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 21–12–2009ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಅಯುಕ್ತರವರು ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2030ರಡಿ ಕಟ್ಟಡ ವೆಚ್ಚ, ಸಾರಿಗೆ ವೆಚ್ಚ, ಪ್ರಯಾಣ ವೆಚ್ಚದ ಉಪ ಲೆಕ್ಕ ಶೀರ್ಷಿಕೆಗಳ ಆಯವ್ಯಯದಲ್ಲಿ ನೀಡಿರುವ ಅನುದಾನ ಸಂಪೂರ್ಣ ವೆಚ್ಚವಾಗಿದ್ದು, ಈಗ ಸದರಿ ಶೀರ್ಷಿಕೆಯಡಿ ಅನುದಾನ ಅವಶ್ಯಕತೆ ಇರುವುದರಿಂದ ಸದರಿ ಲೆಕ್ಕ ಶೀರ್ಷಿಕೆಯಡಿ ಪೂರಕ ವೆಚ್ಚದ ಉಪ ಲೆಕ್ಕ ಶೀರ್ಷಿಕೆಯಲ್ಲಿನ ರೂ. 50.00 ಲಕ್ಷಗಳನ್ನು ಪುನರ್ ಹೊಂದಾಣಿಕೆ ಮಾಡಿ ಆದೇಶ ಹೊರಡಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಕುಲಂಕಷವಾಗಿ ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 6 ಮುನೋಮು 2010, ಬೆಂಗಳೂರು, ದಿನಾಂಕ : 5ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2030–02–102–0–00–015 ಪೂರಕ ವೆಚ್ಚ (ಯೋಜನೇತರ) ಈ ಲೆಕ್ಕ ಶೀರ್ಷಿಕೆಯಿಂದ ರೂ. 50.00 ಲಕ್ಷ (ಐವತ್ತು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಗೆ ಪುನರ್ ಹೊಂದಾಣಿಕೆ ಮಾಡಿ ಸರ್ಕಾರವು ಆದೇಶಿಸಿದೆ.

ಪುನರ್ ಹೊಂದಾಣಿಕೆ ಮೊತ್ತ
ರೂ. ಲಕ್ಷಗಳಲ್ಲಿ

| | |
| --- | --- |
| ಲೆಕ್ಕ ಶೀರ್ಷಿಕೆ 2030–03–001–1–00–071 ಕಟ್ಟಡ ವೆಚ್ಚ (ಯೋಜನೇತರ) | 30.50 |
| ಉಪ ಲೆಕ್ಕ ಶೀರ್ಷಿಕೆ 195 – ಸಾರಿಗೆ ವೆಚ್ಚ (ಯೋಜನೇತರ) | 16.50 |
| ಉಪ ಲೆಕ್ಕ ಶೀರ್ಷಿಕೆ 041 – ಪ್ರಯಾಣ ವೆಚ್ಚ (ಯೋಜನೇತರ) | 3.00 |
| ಒಟ್ಟು | 50.00 |

ಪುನರ್ ವಿನಿಯೋಗ ಪ್ರಪತ್ರ 22–ಎ–ಕೆ.ಎಫ್.ಸಿ. (ಅನುಚ್ಛೇದ 308) ನ್ನು ಅನುಬಂಧಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಕಂಇ 3702 ಐಎಫ್ಎ 2010, ದಿನಾಂಕ : 21–01–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಕೆ. ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.
(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.465

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾನ್ಯ ಗೃಹ ಸಚಿವರ ಅಧಿಕೃತ ನಿವಾಸ 'ಅನುಗ್ರಹ'ಕ್ಕೆ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ಮರು ಅಳವಡಿಸಿರುವ ವೆಚ್ಚ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :**
1) ಮಾನ್ಯ ಗೃಹ ಸಚಿವರ ಆಪ್ತ ಕಾರ್ಯದರ್ಶಿಯವರ ಪತ್ರ, ದಿನಾಂಕ 05–10–2009
2) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 273 ಡಿಟಿಎನ್ 2008, ದಿನಾಂಕ 30–11–2009
3) ಸರ್ಕಾರದ ಪತ್ರ ಸಂಖ್ಯೆ : ಸಿಆಸುಇ 429 ಡಿಟಿಎನ್ 2009, ದಿನಾಂಕ 23–10–2009
4) ಮೆ॥ ಸ್ವಿಸ್ ಮಾರ್ಕೆಟಿಂಗ್ ಕಂ.,ಬೆಂಗಳೂರು ಸಂಸ್ಥೆಯ ಬಿಲ್ ಸಂಖ್ಯೆ:442,ದಿನಾಂಕ 06-01–2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಟಿಪ್ಪಣಿಯಲ್ಲಿ ಮಾನ್ಯ ಗೃಹ ಸಚಿವರ ಅಧಿಕೃತ ನಿವಾಸ ಅನುಗ್ರಹ, ಇಲ್ಲಿಗೆ ಇಪಿಎಬಿಎಕ್ಸ್ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ಅಳವಡಿಸುವಂತೆ ಸಚಿವರ ಆಪ್ತ ಕಾರ್ಯದರ್ಶಿಯವರಿಂದ ಕೋರಿಕೆ ಬಂದಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಸಿ.ಆ.ಸು. ಇಲಾಖೆ (ಕಾರ್ಯಕಾರಿ) ಶಾಖೆಯ ವಶದಲ್ಲಿರುವ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ಕೇಬ್ಲಿಂಗ್ ಮತ್ತು ಕೇಸಿಂಗ್ ವೆಚ್ಚವನ್ನು ಮೀಟರ್‌ಗೆ ರೂ. 14/– ರಂತೆ ನಿಗದಿಪಡಿಸಲಾಗಿದೆ. ಅದರಂತೆ ಮಾನ್ಯ ಗೃಹ ಸಚಿವರ ಅಧಿಕೃತ ನಿವಾಸಕ್ಕೆ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು (6+2) 8 ವಿಸ್ತೀರ್ಣಗಳೊಂದಿಗೆ ಒಂದು ಮೀಟರ್‌ಗೆ ರೂ. 14/– ವೆಚ್ಚದಲ್ಲಿ (ಕೇಬ್ಲಿಂಗ್ ಮತ್ತು ಕೇಸಿಂಗ್ ವೆಚ್ಚ ಸೇರಿ) ಅಳವಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಸದರಿ ಸಂಸ್ಥೆಯನ್ನು ಕೋರಲಾಗಿತ್ತು. ಅದರಂತೆ ಸಚಿವರ ಅಧಿಕೃತ ನಿವಾಸಕ್ಕೆ ಪ್ಯಾನಾಸೋನಿಕ್ ಕೀ ಟೆಲಿಫೋನ್ ವ್ಯವಸ್ಥೆಯನ್ನು ಮರು ಅಳವಡಿಸುವ ಒಟ್ಟು ವೆಚ್ಚ ರೂ. 13,300.00ನ್ನು ಪಾವತಿಸುವಂತೆ ಮೆ॥ ಸ್ವಿಸ್ ಮಾರ್ಕೆಟಿಂಗ್ ಕಂ., ಬೆಂಗಳೂರು ಸಂಸ್ಥೆಯು ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿನ ಬಿಲ್ಲನ್ನು ಪಾವತಿಗಾಗಿ ಸಲ್ಲಿಸಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 429 ಡಿಟಿಎನ್ 2009, ಬೆಂಗಳೂರು, ದಿನಾಂಕ 06ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿನ ವಿವರಣೆಯನ್ವಯ ಮಾನ್ಯ ಗೃಹ ಸಚಿವರ ಅಧಿಕೃತ ನಿವಾಸ ಅನುಗ್ರಹ ಇಲ್ಲಿಗೆ ಸಿ.ಆ.ಸು.ಇ. (ಕಾರ್ಯಕಾರಿ–ಎ) ಶಾಖೆಯ ದಾಸ್ತಾನಿನಲ್ಲಿದ್ದ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು 8 (6+2) ವಿಸ್ತರಣೆಗಳೊಂದಿಗೆ ಮರು ಅಳವಡಿಸಿರುವ (ಕೇಬ್ಲಿಂಗ್ ಮತು ಮರು ಅಳವಡಿಕೆ ವೆಚ್ಚ ಸೇರಿ) ವೆಚ್ಚ ರೂ. 13,300.00 (ರೂ. ಹದಿಮೂರು ಸಾವಿರದ ಮುನ್ನೂರು ಮಾತ್ರ) (ತೆರಿಗೆ ಸೇರಿ) ಗಳನ್ನು ಮೆ॥ ಸ್ವಿಸ್ ಮಾರ್ಕೆಟಿಂಗ್ ಕಂ/ ನಂ/ 277/14, ಪೋಸ್ಟ್ ಆಫೀಸ್ ಎದುರು, 10ನೇ ಕ್ರಾಸ್, ವಿಲ್ಸನ್ ಗಾರ್ಡನ್, ಬೆಂಗಳೂರು–27 ಸಂಸ್ಥೆಗೆ ಪಾವತಿ ಮಾಡಲು ಈ ಮೂಲಕ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "2013–ಮಂತ್ರಿಮಂಡಲ–800–ಇತರೆ ವೆಚ್ಚಗಳು–051–ಸಾಮಾನ್ಯ ವೆಚ್ಚಗಳು" ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ 10–07–1996 ರಲ್ಲಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಎಸ್. ಮಂಜುನಾಥ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ (ಕಾರ್ಯಕಾರಿ)

ಪಿಆರ್–388

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾನ್ಯ ತೋಟಗಾರಿಕೆ ಮತ್ತು ಬಂದೀಖಾನೆ ಸಚಿವರ ಅಧಿಕೃತ ನಿವಾಸಕ್ಕೆ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ಮರು ಅಳವಡಿಸಿರುವ ವೆಚ್ಚ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :** 1) ತೋಟಗಾರಿಕೆ ಮತ್ತು ಬಂದೀಖಾನೆ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ : ತೋಬಣಸ/1726/2009, ದಿನಾಂಕ 01–12–2009

2) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 273 ಡಿಟಿಎನ್ 2008, ದಿನಾಂಕ 30–11–2009

3) ಸರ್ಕಾರದ ಪತ್ರ ಸಂಖ್ಯೆ : ಸಿಆಸುಇ 493 ಡಿಟಿಎನ್ 2009, ದಿನಾಂಕ 22–12–2009

4) ಮೆ॥ ಸ್ವಿಸ್ ಮಾರ್ಕೆಟಿಂಗ್ ಕಂ., ಬೆಂಗಳೂರು ಸಂಸ್ಥೆ ಬಿಲ್ ಸಂಖ್ಯೆ 440 ದಿನಾಂಕ 05–01–2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಟಿಪ್ಪಣಿಯಲ್ಲಿ ತೋಟಗಾರಿಕೆ ಮತ್ತು ಬಂದೀಖಾನೆ ಸಚಿವರಿಗೆ ಸರ್ಕಾರದ ವತಿಯಿಂದ ಹಂಚಿಕೆಯಾಗಿರುವ ಮನೆ ನಂ. 80, 4ನೇ ಅಡ್ಡ ರಸ್ತೆ, 2ನೇ ಮುಖ್ಯ ರಸ್ತೆ, ಡಾಲರ್ಸ್ ಕಾಲೋನಿ, ಆರ್.ಎಂ.ವಿ. 2ನೇ ಹಂತ, ಬೆಂಗಳೂರು, ಇಲ್ಲಿನ ನಿವಾಸಕ್ಕೆ ಇಪಿಎಬಿಎಕ್ಸ್ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ಅಳವಡಿಸುವಂತೆ ಸಚಿವರ ಆಪ್ತ ಕಾರ್ಯದರ್ಶಿಯವರಿಂದ ಕೋರಿಕೆ ಬಂದಿತ್ತು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸಿ.ಆ.ಸು. ಇಲಾಖೆ (ಕಾರ್ಯಕಾರಿ) ಶಾಖೆಯ ವಶದಲ್ಲಿರುವ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯ ಕೇಬ್ಲಿಂಗ್ ಮತ್ತು ಕೇಸಿಂಗ್ ವೆಚ್ಚವನ್ನು ಮೀಟರ್‌ಗೆ ರೂ. 14/– ರಂತೆ ನಿಗದಿಪಡಿಸಲಾಗಿದೆ. ಅದರಂತೆ ಮಾನ್ಯ ತೋಟಗಾರಿಕೆ ಸಚಿವರ ಅಧಿಕೃತ ನಿವಾಸಕ್ಕೆ ಪ್ಯಾನಾಸೋನಿಕ್ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು (3+1)4 ವಿಸ್ತೀರ್ಣಗಳೊಂದಿಗೆ ಒಂದು ಮೀಟರ್‌ಗೆ ರೂ. 14/– ವೆಚ್ಚದಲ್ಲಿ (ಕೇಬ್ಲಿಂಗ್ ಮತ್ತು ಕೇಸಿಂಗ್ ವೆಚ್ಚ ಸೇರಿ) ಅಳವಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಸದರಿ ಸಂಸ್ಥೆಯನ್ನು ಕೋರಲಾಗಿತ್ತು. ಅದರಂತೆ ಸಚಿವರ ಅಧಿಕೃತ ನಿವಾಸಕ್ಕೆ ಪ್ಯಾನಾಸೋನಿಕ್ ಕೀ ಟೆಲಿಫೋನ್ ವ್ಯವಸ್ಥೆಯನ್ನು ಮರು ಅಳವಡಿಸಿರುವ ಒಟ್ಟು ವೆಚ್ಚ ರೂ. 8,969.00ನ್ನು ಪಾವತಿಸುವಂತೆ ಮೆ॥ ಸ್ವಿಸ್ ಮಾರ್ಕೆಟಿಂಗ್ ಕಂ., ಬೆಂಗಳೂರು ಸಂಸ್ಥೆಯು ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿನ ಬಿಲ್ಲನ್ನು ಪಾವತಿಗಾಗಿ ಸಲ್ಲಿಸಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 493 ಡಿಟಿಎನ್ 2009, ಬೆಂಗಳೂರು, ದಿನಾಂಕ 06ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿನ ವಿವರಣೆಯನ್ವಯ ತೋಟಗಾರಿಕೆ ಮತ್ತು ಬಂದೀಖಾನೆ ಸಚಿವರ ಅಧಿಕೃತ ನಿವಾಸ ಸಂಖ್ಯೆ : 80, 4ನೇ ಅಡ್ಡ ರಸ್ತೆ, 3ನೇ ಮುಖ್ಯ ರಸ್ತೆ, ಡಾಲರ್ಸ್ ಕಾಲೋನಿ, ಆರ್.ಎಂ.ವಿ. 2ನೇ ಹಂತ, ಬೆಂಗಳೂರು ಇಲ್ಲಿಗೆ ಸಿ.ಆ.ಸು.ಇ. (ಕಾರ್ಯಕಾರಿ–ಎ) ಶಾಖೆಯ ದಾಸ್ತಾನಿನಲ್ಲಿದ್ದ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು 4 (3+1) ವಿಸ್ತರಣೆಗಳೊಂದಿಗೆ ಮರು ಅಳವಡಿಸಿರುವ (ಕೇಬ್ಲಿಂಗ್ ಮತ್ತು ಮರು ಅಳವಡಿಕೆ ವೆಚ್ಚ ಸೇರಿ) ವೆಚ್ಚ ರೂ. 8,960.00 (ರೂ. ಎಂಟು ಸಾವಿರದ ಒಂಭೈನೂರ ಅರವತ್ತು ಮಾತ್ರ) (ತೆರಿಗೆ–ಸೇರಿ) ಗಳನ್ನು ಮೇ॥ ಸ್ವಿಸ್ ಮಾರ್ಕೆಟಿಂಗ್ ಕಂ., ನಂ. 277/14, ಪೋಸ್ಟ್ ಆಫೀಸ್ ಎದುರು, 10ನೇ ಕ್ರಾಸ್ ವಿಲ್ಸನ್ ಗಾರ್ಡನ್, ಬೆಂಗಳೂರು–27 ಸಂಸ್ಥೆಗೆ ಪಾವತಿ ಮಾಡಲು ಈ ಮೂಲಕ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕಶೀರ್ಷಿಕೆ "2013–ಮಂತ್ರಿಮಂಡಲ–800–ಇತರೆ ವೆಚ್ಚಗಳು–051–ಸಾಮಾನ್ಯ ವೆಚ್ಚಗಳು ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ 10–07–1996 ರಲ್ಲಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಎಸ್. ಮಂಜುನಾಥ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು. ಇಲಾಖೆ (ಕಾರ್ಯಕಾರಿ)

ಪಿಆರ್–389

**ಕಾರ್ಮಿಕ ಸಚಿವಾಲಯ**

**ವಿಷಯ :** ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದ ತರಬೇತಿ ಅಧಿಕಾರಿಗಳಿಗೆ ಪ್ರಾಚಾರ್ಯರು ದರ್ಜೆ-2/ ಸಹಾಯಕ ನಿರ್ದೇಶಕರು ಹುದ್ದೆಗೆ ವೃತ್ತಿವಾರು ಜ್ಯೇಷ್ಠತೆಯನ್ವಯ ಬಡ್ತಿ ನೀಡಿರುವುದನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆಧಿಸೂಚನೆ ಸಂಖ್ಯೆ : ಕಾಇ 295 ಇಟಿಐ 2006, ದಿನಾಂಕ 22-12-2006

2) ಸರ್ಕಾರದ ಆಧಿಸೂಚನೆ ಸಂಖ್ಯೆ : ಕಾಇ 347 ಇಟಿಐ 2007(1), ದಿನಾಂಕ 07-01-2008

3) ಸರ್ಕಾರದ ಆಧಿಸೂಚನೆ ಸಂಖ್ಯೆ : ಕಾಇ 347 ಇಟಿಐ 2007(2), ದಿನಾಂಕ 07-01-2008

4) ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ 1495/97, 4466-4467/97 ಮತ್ತು 3761/98 ಮೇಲಿನ ಅಂತಿಮ ಆದೇಶ ದಿನಾಂಕ 24-03-2005.

5) ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ 4585-90/2005, 6765-66/2005 ಮತ್ತು 7437-54/2005ರ ದಿನಾಂಕ 17-09-2009ರ

**ಅಂತಿಮ ಆದೇಶ**

6) ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ : 86-87/2009, 88-89/2009 ಮತ್ತು 90-91/2009

7) ಕಾರಣ ಕೇಳುವ ನೋಟೀಸ್ ಸಂಖ್ಯೆ ಕಾಇ 225 ಇಟಿಐ 2009, ದಿನಾಂಕ 20-05-2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದಲ್ಲಿ ಖಾಲಿಯಿದ್ದ ಪ್ರಾಚಾರ್ಯರು ದರ್ಜೆ-2/ಸಮಾನಾಂತರ ಹುದ್ದೆಗಳಿಗೆ ತರಬೇತಿ ಅಧಿಕಾರಿಗಳಿಗೆ ವೃತ್ತಿವಾರು ಜ್ಯೇಷ್ಠತೆಯನ್ವಯ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿ/ಉಚ್ಚ ನ್ಯಾಯಾಲಯವು ನೀಡಬಹುದಾದ ತೀರ್ಪಿನ ಷರತ್ತಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32ರನ್ವಯ 21 ಅಧಿಕಾರಿಗಳನ್ನು ಸ್ವತಂತ್ರ ಪ್ರಭಾರದಲ್ಲಿ ನೇಮಕ ಮಾಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದಲ್ಲಿ ಖಾಲಿಯಿದ್ದ ಪ್ರಾಚಾರ್ಯರು ದರ್ಜೆ-2/ಸಮಾನಾಂತರ ಹುದ್ದೆಗಳಿಗೆ ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯನ್ವಯ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32ರನ್ವಯ ಸ್ವತಂತ್ರ ಪ್ರಭಾರದಲ್ಲಿಟ್ಟ 17 ಅಧಿಕಾರಿಗಳೊಂದಿಗೆ ಅಧಿಸೂಚನೆ ಸಂಖ್ಯೆ : ಕಾಇ 165 ಇಟಿಐ 2001 ದಿನಾಂಕ 04-04-2003 ರಲ್ಲಿ ಪ್ರಾಚಾರ್ಯರು ದರ್ಜೆ-2 ಹುದ್ದೆಯ ಸ್ವತಂತ್ರ ಪ್ರಭಾರದಲ್ಲಿರಿಸಿದ ಶ್ರೀ ಟಿ. ಆರ್. ಲಕ್ಷ್ಮೀರಾಜಯ್ಯ ರವರಿಗೂ ಸಹ ಸ್ಥಾನಪನ್ನ ಮುಂಬಡ್ತಿಯನ್ನು ನೀಡಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದಲ್ಲಿ ಖಾಲಿಯಿದ್ದ ಪ್ರಾಚಾರ್ಯರು ದರ್ಜೆ-2/ಸಮಾನಾಂತರ ಹುದ್ದೆಗಳಿಗೆ 03 ಅಧಿಕಾರಿಗಳಿಗೆ ಸ್ಥಾನಪನ್ನ ಮುಂಬಡ್ತಿಯನ್ನು ನೀಡಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅಂತಿಮ ಆದೇಶದಲ್ಲಿ ದಿನಾಂಕ 20-12-1996ರ ಕಿರಿಯ ತರಬೇತಿ ಅಧಿಕಾರಿಗಳ ವೃತ್ತಿವಾರು ಜ್ಯೇಷ್ಠತಾ ಪಟ್ಟಿಯನ್ನು ತಳ್ಳಿಹಾಕಿರುತ್ತದೆ.

ಮೇಲೆ (5)ರಲ್ಲಿ ಓದಲಾದ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮಧ್ಯಂತರ ಅದೇಶದಲ್ಲಿ ದಿನಾಂಕ 26-09-2005 ರಿಂದ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವಂತೆ ಆದೇಶಿಸಲಾಗಿತ್ತು.

ಮೇಲೆ (6)ರಲ್ಲಿ ಓದಲಾದ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ನಿಂದನಾ ಅರ್ಜಿಗಳಲ್ಲಿ ದಿನಾಂಕ 26-09-2005ರ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮಧ್ಯಂತರ ಆದೇಶವನ್ನು ಅನುಷ್ಠಾನಗೊಳಿಸದಿರುವ ಕ್ರಮವನ್ನು ಅರ್ಜಿದಾರರು ಪ್ರಶ್ನಿಸಿರುತ್ತಾರೆ.

ಮೇಲೆ (7)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸುಗಳಲ್ಲಿ ವೃತ್ತಿವಾರು ಜ್ಯೇಷ್ಠತೆಯನುಸಾರ ತರಬೇತಿ ಅಧಿಕಾರಿ ಹುದ್ದೆಯಿಂದ ಪ್ರಾಚಾರ್ಯರು ದರ್ಜೆ-2/ಸಮಾನಾಂತರ ವೃಂದಕ್ಕೆ ಮುಂಬಡ್ತಿ ಪಡೆದ ಅಧಿಕಾರಿಗಳಿಗೆ ನೀಡಲಾದ ಮುಂಬಡ್ತಿಯನ್ನು ಪೂರ್ವಾನ್ವಯವಾಗಿ ಹಿಂಪಡೆಯುವ ಬಗ್ಗೆ ಸಮಜಾಯಿಷಿ ನೀಡುವಂತೆ ಕೋರಲಾಗಿತ್ತು. ಸದರಿ ಅಧಿಕಾರಿಗಳು ನೀಡಿರುವ ಸಮಜಾಯಿಷಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ಅಲ್ಲದೆ ಈ ಅಧಿಕಾರಿಗಳು ಉಲ್ಲೇಖ (4)ರ ಆದೇಶವನ್ನು ಪ್ರಶ್ನಿಸಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಲಾಗಿದ್ದ ಅರ್ಜಿಗಳನ್ನು ಉಲ್ಲೇಖ (5)ರಲ್ಲಿ ವಜಾಗೊಳಿಸಲಾಗಿರುತ್ತದೆ ಹಾಗೂ ಈ ಕುರಿತು ಮಾನ್ಯ ಉಚ್ಚ ನ್ಯಾಯಾಲಯಗಳಲ್ಲಿ ಸಲ್ಲಿಸಲಾದ ರಿಟ್ ಅರ್ಜಿ ಸಂಖ್ಯೆ: 286740-28651/2009 ಮತ್ತು 28653/2009ಗಳನ್ನು ಮಾನ್ಯ ಉಚ್ಚ ನ್ಯಾಯಾಲಯವು ಸಹ ವಜಾಗೊಳಿಸಿರುತ್ತದೆ. ಆದಕಾರಣ ವೃತ್ತಿವಾರು ಜ್ಯೇಷ್ಠತೆಯನುಸಾರ ತರಬೇತಿ ಅಧಿಕಾರಿ ಹುದ್ದೆಯಿಂದ ಪ್ರಾಚಾರ್ಯರು ದರ್ಜೆ-2/ಸಮಾನಾಂತರ

ವೃಂದಕ್ಕೆ ಮುಂಬಡ್ತಿ ಪಡೆದ ಅಧಿಕಾರಿಗಳ ಮುಂಬಡ್ತಿ ಆದೇಶಗಳನ್ನು ಹಿಂಪಡೆಯುವ ಕುರಿತು ತೀರ್ಮಾನಿಸಲಾಗಿರುತ್ತದೆ. ಆದ್ದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಕಾಇ 225 ಇಟಿಐ 2009, ಬೆಂಗಳೂರು, ದಿನಾಂಕ 08ನೇ ಫೆಬ್ರವರಿ 2010**

ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದ ಈ ಕೆಳಕಂಡ ತರಬೇತಿ ಅಧಿಕಾರಿಗಳಿಗೆ ದಿನಾಂಕ 26–12–1996ರ ವೃತ್ತಿವಾರು ಜ್ಯೇಷ್ಠತೆಯನ್ವಯ ಪ್ರಾಚಾರ್ಯರು ದರ್ಜೆ–2/ಸಮಾನಾಂತರ ವೃಂದಕ್ಕೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 32 ರಡಿ ಸ್ವತಂತ್ರ ಪ್ರಭಾರದಲ್ಲಿರಿಸಿದ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಾಇ 295 ಇಟಿಐ 2006 ದಿನಾಂಕ 22–12–2006 ಹಾಗೂ ಪ್ರಾಚಾರ್ಯರು ದರ್ಜೆ–2/ಸಮಾನಾಂತರ ವೃಂದಕ್ಕೆ ಸ್ಥಾನಪನ್ನ ಮುಂಬಡ್ತಿ ನೀಡಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಾಇ 347 ಇಟಿಐ 2007 (1) ದಿನಾಂಕ 07–01–2008 ಮತ್ತು ಕಾಇ 347 ಇಟಿಐ 2007(2) ದಿನಾಂಕ 07–01–2008ರ ಅಧಿಸೂಚನೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹಿಂಪಡೆಯಲಾಗಿದೆ ಇವರಿಗೆ ತರಬೇತಿ ಅಧಿಕಾರಿ ವೃಂದದಲ್ಲಿ ಸೂಕ್ತ ಸ್ಥಳ ನಿಯುಕ್ತಿ ಆದೇಶವನ್ನು ಹೊರಡಿಸುವಂತೆ ಆಯುಕ್ತರು ಉದ್ಯೋಗ ಮತ್ತು ತರಬೇತಿ ಇಲಾಖೆ ಇವರಿಗೆ ತಿಳಿಸಿದೆ.

1. ಶ್ರೀ ಟಿ. ಆರ್. ಲಕ್ಷ್ಮೀರಾಜಯ್ಯ
2. ಶ್ರೀ ಎಂ. ಎಸ್. ಸುಬ್ರಹ್ಮಣ್ಯ
3. ಶ್ರೀ ಕೆ. ಶಂಕರಮೂರ್ತಿ
4. ಶ್ರೀ ಜಗದೀಶ್
5. ಶ್ರೀಮತಿ ಕಲ್ಪನಾ ಬಿ. ಗೋಗಲೆ
6. ಶ್ರೀ ಹೆಚ್.ಎಂ. ಜರೀಫುಲ್ಲಾ
7. ಶ್ರೀಮತಿ ಪಿ. ರಮಾ
8. ಶ್ರೀ ಯು.ಕೆ. ರಜಪೂತ
9. ಶ್ರೀ ಮುರಳೀಧರ ಟಿ. ಲಮಾಣಿ
10. ಶ್ರೀಮತಿ ಚೇತನಾ ವಿ. ಹಿರೇಮಠ
11. ಶ್ರೀ ಗಿರಿಧರಮೂರ್ತಿ
12. ಶ್ರೀಮತಿ ನಾಗರತ್ನ ವಿ. ಕೊಟೂರು
13. ಶ್ರೀ ಎ. ಬಾಲಕೃಷ್ಣ
14. ಶ್ರೀಮತಿ ಜಯಲಕ್ಷ್ಮಿ ಕೆ.
15. ಶ್ರೀ ಸಿ. ವಿ. ಹಲಕುರ್ಕಿ
16. ಶ್ರೀಮತಿ ಎಂ. ಸಿ. ನಾಗರತ್ನ
17. ಶ್ರೀಮತಿ ರೇವತಿ ವಿ.
18. ಶ್ರೀ ಎಂ. ಜಯೇಂದ್ರ
19. ಶ್ರೀಮತಿ ಎಸ್. ವನಜ
20. ಶ್ರೀ ಡಿ. ವಿ. ಸುರೇಶ್
21. ಶ್ರೀ ಸಿ. ಜಿ. ರವಿಶಂಕರ್

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎ. ಎಸ್. ವಿಶ್ವೇಶ್ವರಯ್ಯ)**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ,
(ಉದ್ಯೋಗ ಮತ್ತು ತರಬೇತಿ)

ಪಿಆರ್–390

**ಕಾರ್ಮಿಕ ಸಚಿವಾಲಯ**

**ವಿಷಯ :** ಉದ್ಯೋಗ ವಿನಿಮಯ ಕೇಂದ್ರಗಳ (ಖಾಲಿ ಹುದ್ದೆಗಳ ಕಡ್ಡಾಯ ಅಧಿಸೂಚನೆ) ಅಧಿನಿಯಮ ಜಾರಿ ಘಟಕ, ಗುಲ್ಬರ್ಗಾ, ಮೈಸೂರು ಮತ್ತು ಹುಬ್ಬಳ್ಳಿ ಇಲ್ಲಿಗೆ ಮಂಜೂರಾಗಿರುವ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರ ಸಂ. ಉತನಿ/ಉದ್ಯೋಗ/ಆಡಳಿತ–1/ವಿವ–65/2009–10 ದಿನಾಂಕ : 07–01–2010.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಉದ್ಯೋಗ ವಿನಿಮಯ ಕೇಂದ್ರಗಳ (ಖಾಲಿ ಹುದ್ದೆಗಳ ಕಡ್ಡಾಯ ಅಧಿಸೂಚನೆ) ಅಧಿನಿಯಮ ಜಾರಿ ಘಟಕ, ಮೈಸೂರು, ಹುಬ್ಬಳ್ಳಿ, ಮತ್ತು ಗುಲ್ಬರ್ಗಾ ಈ ಘಟಕ ಕಛೇರಿಗಳಿಗೆ ಮಂಜೂರಾಗಿದ್ದ 3 ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಕ್ರಮವಾಗಿ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ ಮೈಸೂರು, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ ಬೆಳಗಾವಿ ಮತ್ತು ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ ಗುಲ್ಬರ್ಗಾ ಇಲ್ಲಿಗೆ ಸ್ಥಳಾಂತರಿಸಿ ಆಡಳಿತಾತ್ಮಕ ಅಧಿಕಾರ, ಹಣ ತೆಗೆಯುವ ಮತ್ತು ಬಟವಾಡೆ ಮಾಡುವ ಅಧಿಕಾರವನ್ನು ಮಂಜೂರು ಮಾಡಿ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಾಇ 3 ಇಟಿಎಕ್ಸ್ 2010, ಬೆಂಗಳೂರು, ದಿನಾಂಕ 04ನೇ ಫೆಬ್ರವರಿ 2010**

ಉದ್ಯೋಗ ವಿನಿಮಯ ಕೇಂದ್ರಗಳ (ಖಾಲಿ ಹುದ್ದೆಗಳ ಕಡ್ಡಾಯ ಅಧಿಸೂಚನೆ)ಅಧಿನಿಯಮ ಜಾರಿ ಘಟಕ, ಮೈಸೂರು, ಹುಬ್ಬಳ್ಳಿ ಮತ್ತು ಗುಲ್ಬರ್ಗಾ ಈ ಘಟಕ ಕಛೇರಿಗಳಿಗೆ ಮಂಜೂರಾಗಿದ್ದ 3 ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಕ್ರಮವಾಗಿ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ ಮೈಸೂರು, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ ಬೆಳಗಾವಿ ಮತ್ತು ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ ಗುಲ್ಬರ್ಗಾ ಇಲ್ಲಿಗೆ ಸ್ಥಳಾಂತರಿಸಿ ಹಣ ತೆಗೆಯುವ ಮತ್ತು ಬಟವಾಡೆ ಮಾಡುವ ಅಧಿಕಾರವನ್ನು ಪ್ರತ್ಯಾಯೋಜಿಸಿ ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎ. ಎಸ್. ವಿಶ್ವೇಶ್ವರಯ್ಯ)**

ಪಿಆರ್–391

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ,

(ಉದ್ಯೋಗ ಮತ್ತು ತರಬೇತಿ)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ತುಮಕೂರು ನಗರದ ಉಪ್ಪಾರಹಳ್ಳಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 40–41ರ ರಸ್ತೆ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ : ಮೂಅಇ 65 ರಾರಾಹೆ 2007, ದಿನಾಂಕ 27–7–07
2) ಸರ್ಕಾರದ ಆದೇಶ ಸಂಖ್ಯೆ : ಮೂಅಇ 65 ರಾರಾಹೆ 2007, ದಿನಾಂಕ 12–8–2008
3) ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡ, (ದ) ಬೆಂಗಳೂರು ಇವರ ದಿನಾಂಕ 04–02–2010 ಪತ್ರ ಸಂಖ್ಯೆ : ಸಿಬಿಎಸ್‌ರೈಸುಕಾ : ಅನುದಾನ 2009–10 ಪತ್ರ.

**ಪ್ರಸ್ತಾವನೆ :**

ತುಮಕೂರು ನಗರದ ಉಪ್ಪಾರಹಳ್ಳಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 40–41ರ ರಸ್ತೆ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣ ಕಾಮಗಾರಿಯನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರ ಶೇ 50 : 50 ವೆಚ್ಚವನ್ನು ಹಂಚಿಕೆ ಆಧಾರದ ಮೇಲೆ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಹಾಗೂ ಸದರಿ ರಸ್ತೆಯ ಕಾಮಗಾರಿಗೆ ಬೇಕಾಗುವ ಭೂಸ್ವಾದೀನ ಹಾಗೂ ನಾಗರೀಕ ಸೌಲಭ್ಯಗಳ ಸ್ಥಳಾಂತರಕ್ಕೆ ಕ್ರಮವಾಗಿ ರೂ. 3,42 ಮತ್ತು 349.10 ಲಕ್ಷಗಳನ್ನು ಮೇಲೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶಗಳಲ್ಲಿ ಬಿಡುಗಡೆ ಮಾಡಲಾಗಿತ್ತು.

ಎಲ್.ಸಿ. ಸಂಖ್ಯೆ 40–41ರಲ್ಲಿ ರಸ್ತೆ ಮೇಲು ಸೇತುವೆಗೆ ಕೂಡು ರಸ್ತೆ ನಿರ್ಮಿಸುವ ಕಾಮಗಾರಿಗೆ ತಗಲುವ ಮೊತ್ತ ರೂ. 14.42 ಕೋಟಿಗಳು, ಸದರಿ ಕಾಮಗಾರಿಯು ಪ್ರಗತಿಯಲ್ಲಿದ್ದು ನಿಗದಿತ ಅವಧಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಬೇಕಾಗಿರುವುದರಿಂದ ರಾಜ್ಯ ಸರ್ಕಾರದ ಪಾಲಿನ ಮೊತ್ತದಲ್ಲಿ ರೂ. 5.00 ಕೋಟಿಯನ್ನು ಬಿಡುಗಡೆ ಮಾಡಬೇಕೆಂದು ಮೇಲೆ ಓದಲಾದ (3)ರ ಪತ್ರದಲ್ಲಿ ಲೋಕೋಪಯೋಗಿ ಇಲಾಖೆಯ (ದಕ್ಷಿಣ) ಮುಖ್ಯ ಇಂಜಿನಿಯರವರು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 34 ರಾರಾಹೆ 2009, ಬೆಂಗಳೂರು, ದಿನಾಂಕ 06ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತುಮಕೂರು ನಗರದ ಉಪ್ಪಾರಹಳ್ಳಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 40–41ರ ರಸ್ತೆ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣದ ಕಾಮಗಾರಿಗೆ ರಾಜ್ಯ ಸರ್ಕಾರದ ಪಾಲಿನ ಮೊತ್ತದಲ್ಲಿ ರೂ. 3.00 ಕೋಟಿಗಳನ್ನು (ರೂಪಾಯಿ ಮೂರು ಕೋಟಿ ಮಾತ್ರ) 2009–10ನೇ ಸಾಲಿನ ಆಯವ್ಯಯದ

ಲೆಕ್ಕಶೀರ್ಷಿಕೆ "5465-01-190-3-04-(ಯೋಜನೆ)-211 ಬಂಡವಾಳ" ಇದರ ಅಡಿಯಲ್ಲಿ ರಸ್ತೆ ಮೇಲುಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ 30.00 ಕೋಟಿಗಳಿಂದ ಬಿಡುಗಡೆ ಮಾಡಲಾಗಿದೆ.

2. ಈ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ತುಮಕೂರು ವಿಭಾಗ ತುಮಕೂರು ಇವರು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಪೇಯಿಸ್ ರಸೀತಿಯ ಮೂಲಕ ಡ್ರಾ ಮಾಡಿ ಕೂಡು ರಸ್ತೆ ನಿರ್ಮಾಣದ ವೆಚ್ಚ ಭರಿಸತಕ್ಕದ್ದು.

3. ಈ ಆದೇಶವನ್ನು ದಿನಾಂಕ 16-5-2008 ಸಂಖ್ಯೆ FD 1TFP 2008 ಸರ್ಕಾರಿ ಆದೇಶದಲ್ಲಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎನ್. ಮಂಜುಳಗೀತ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ,

ಪಿಆರ್-392

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ಭೋಳಮಾನದೊಡ್ಡಿ ರಸ್ತೆಯ ಹತ್ತಿರ ಒಟ್ಟು 13.36 ಎಕರೆ ಪ್ರದೇಶದಲ್ಲಿ ವಸತಿ ಯೋಜನೆ ಕೈಗೊಳ್ಳಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ರವರ ಪತ್ರ ದಿನಾಂಕ : 24-11-2009.

**ಪ್ರಸ್ತಾವನೆ :**

ಆಯುಕ್ತರು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ರವರು ಮೇಲೆ ಓದಲಾದ ಪತ್ರದಲ್ಲಿ ರಾಯಚೂರು ತಾಲ್ಲೂಕು, ರಾಯಚೂರು ಗ್ರಾಮದ ಸ.ನಂ. 935/11, 935/12 ಮತ್ತು 936 ಒಟ್ಟು 13 ಎಕರೆ 36 ಗುಂಟೆ ಜಮೀನನ್ನು ಭೋಳಮಾನದೊಡ್ಡಿ ರಸ್ತೆಯ ಹತ್ತಿರ ವಸತಿ ಯೋಜನೆಯನ್ನು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 35ರನ್ವಯ ಪರಸ್ಪರ ಒಪ್ಪಂದದ ಮೇರೆಗೆ ಭೂ ಮಾಲೀಕರಿಂದ ಖರೀದಿಸುವ ಮೂಲಕ ಭೂ ಸ್ವಾಧೀನಪಡಿಸಿಕೊಂಡು ಕೈಗೊಳ್ಳಲು ಸರ್ಕಾರದ ಪತ್ರ ಸಂಖ್ಯೆ : ನಅಇ 40 ಗುಅಪ್ರಾ 2007, ದಿನಾಂಕ : 17-08-2007 ರಲ್ಲಿ ಅನುಮೋದನೆ ನೀಡಿರುತ್ತದೆಂದು ತಿಳಿಸಿದ್ದಾರೆ. ಅದರಂತೆ ಈ ಜಮೀನಿನಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಒಟ್ಟು ರೂ. 541.22 ಲಕ್ಷಗಳಲ್ಲಿ ಅಭಿವೃದ್ಧಿಪಡಿಸಲು ಅಂದಾಜು ಪಟ್ಟಿಯನ್ನು ತಯಾರಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಸದರಿ ಯೋಜನೆಯಡಿ, ಒಟ್ಟು 216 ನಿವೇಶನಗಳನ್ನು ಅಭಿವೃದ್ಧಿ ಪಡಿಸಲು ಉದ್ದೇಶಿಸಲಾಗಿದ್ದು, ಭೂ ಸ್ವಾಧೀನದ ವೆಚ್ಚ, ಸಿವಿಲ್ ಕಾಮಗಾರಿಗಳ ವೆಚ್ಚ, ನೀರು ಸರಬರಾಜು, ಒಳಚರಂಡಿ, ವಿದ್ಯುತ್ ಸರಬರಾಜು ವ್ಯವಸ್ಥೆ, ಇತ್ಯಾದಿ ವೆಚ್ಚಗಳನ್ನೊಳಗೊಂಡ ಅಂದಾಜು ಪಟ್ಟಿಯನ್ನು ಈ ಕೆಳಕಂಡಂತೆ ಸಲ್ಲಿಸಲಾಗಿದೆ.

| | |
|---|---|
| 1. ಭೂ ಸ್ವಾಧೀನದ ಅಂದಾಜು ವೆಚ್ಚ | ರೂ. 110.22 ಲಕ್ಷಗಳು |
| 2. ವಿದ್ಯುತ್ ಸೌಲಭ್ಯಕ್ಕೆ (ಜೆಸ್ಕಾಮ್) | ರೂ. 39.23 ಲಕ್ಷಗಳು |
| 3. ಸಿವಿಲ್ ಕಾಮಗಾರಿಗಳ ವೆಚ್ಚ (ಪಿಡಬ್ಲ್ಯೂಡಿ) | ರೂ. 177.00 ಲಕ್ಷಗಳು |
| 4. ನೀರು ಸರಬರಾಜು ವೆಚ್ಚ (ಕನನೀಸಒಚಮಂ) | ರೂ. 45.45 ಲಕ್ಷಗಳು |
| 5. ಒಳಚರಂಡಿ ವ್ಯವಸ್ಥೆ (ಕನನೀಸಒಚಮಂ) | ರೂ. 70.60 ಲಕ್ಷಗಳು |
| 6. ಟೆಂಡರ್ ಪ್ರೀಮಿಯಂ | ರೂ. 20.00 ಲಕ್ಷಗಳು |
| 7. ಬ್ಯಾಂಕ್ ಸಾಲಕ್ಕೆ ಬಡ್ಡಿ | ರೂ. 20.00 ಲಕ್ಷಗಳು |
| 8. ಕಾರ್ಯಪ್ರಗತಿಯಲ್ಲಿ ಆಗಬಹುದಾದ ಹೆಚ್ಚಳ | ರೂ. 25.00 ಲಕ್ಷಗಳು |
| 9. 10% ಅಭಿವೃದ್ಧಿ ವೆಚ್ಚ | ರೂ. 28.72 ಲಕ್ಷಗಳು |
| | **ರೂ. 541.22 ಲಕ್ಷಗಳು** |

ಸದರಿ ಯೋಜನೆಯಡಿ ರೂಪಿಸಿರುವ ನಿವೇಶನಗಳ ಮಾರಾಟದಿಂದ ಅಂದಾಜು ಮೊತ್ತ ಒಟ್ಟು ರೂ. 589.68 ಲಕ್ಷಗಳ ಆದಾಯವನ್ನು ಹಾಗೂ ಈ ಪೈಕಿ ಪ್ರಾಧಿಕಾರಕ್ಕೆ ಒಟ್ಟು ರೂ. 48.468 ಲಕ್ಷಗಳ ಲಾಭವನ್ನು ನಿರೀಕ್ಷಿಸಬಹುದೆಂದು ತಿಳಿಸಲಾಗಿದೆ. ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದ ವಸತಿ ಯೋಜನೆಗಳ ಅಭಿವೃದ್ಧಿಗೆ ಅಗತ್ಯವಿರುವ ಮೊತ್ತವನ್ನು ಪ್ರಗತಿ ಗ್ರಾಮೀಣ ಬ್ಯಾಂಕ್, ತೀನ್‌ಕಂದಿಲ್ ರಾಯಚೂರು ರವರು ಒಟ್ಟು ರೂ. 6.50 ಕೋಟಿಗಳ ಸಾಲವನ್ನು ನೀಡಲು ಮಂಜೂರು ಮಾಡಿದ್ದು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರವು 2009-10ನೇ ಸಾಲಿನ ಆಯವ್ಯಯದಲ್ಲಿ ಒಟ್ಟು ರೂ. 5.00

ಕೋಟಿಗಳ ಮೊತ್ತವನ್ನು ನಿಗಧಿಪಡಿಸಿರುತ್ತದೆ. ಉಳಿದ ಮೊತ್ತವನ್ನು ಅರ್ಜಿಗಳನ್ನು ಆಹ್ವಾನಿಸುವ ಸಮಯದಲ್ಲಿ ಕ್ರೋಢೀಕರಿಸಲು ಉದ್ದೇಶಿಸಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 202 ಗುಅಪ್ರಾ 2009, ಬೆಂಗಳೂರು, ದಿನಾಂಕ 05ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿದ ನಂತರ, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರವು ಭೋಳಮಾನದೊಡ್ಡಿ ರಸ್ತೆಯ ಹತ್ತಿರ ರಾಯಚೂರು ಗ್ರಾಮ ಸರ್ವೆ ನಂ. 935/11, 935/12, 936 ರಲ್ಲಿನ ಒಟ್ಟು ವಿಸ್ತೀರ್ಣ 13 ಎಕರೆ 36 ಗುಂಟೆ ಜಮೀನಿನಲ್ಲಿ ರೂ. 541.22 ಲಕ್ಷಗಳ ವೆಚ್ಚದಲ್ಲಿ ವಸತಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987 ಕಲಂ 18(3) ರನ್ವಯ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. Sites should be priced, keeping in view the cost escalation in the future and ensuring that full recover of the cost of the land and development charges is made.
2. Sites so formed should be allotted as per allotment rules.
3. Corner sites and commercial sites should be put to public auction as per rules, in order to get more revenue.
4. Allotment of sites should be made before the development of the layout begins so that allottees can monitor the development of the layout which will avoid cost overrun.
5. ಸದರಿ ಕಾಮಗಾರಿಯನ್ನು ನಿರ್ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ನಿಯಮ 2000ನ್ನು ಪಾಲಿಸತಕ್ಕದ್ದು.
6. ಕಾಮಗಾರಿಗಳ ಟೆಂಡರ್‌ಗಳನ್ನು ಕರೆಯುವ ಮುನ್ನ ಸರ್ಕಾರದ ಅನುಮೋದನೆ ಪಡೆದು ಆಹ್ವಾನಿಸತಕ್ಕದ್ದು.
7. ಕಾಮಗಾರಿಗಳ ಗುತ್ತಿಗೆ ನೀಡುವ ಮುನ್ನ ನಿಯಮಾವಳಿಯಂತೆ ಸರ್ಕಾರದ ಅನುಮೋದನೆ ಪಡೆದು ಗುತ್ತಿಗೆಯನ್ನು ನೀಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 851 Exp-9 : 2009, ದಿನಾಂಕ : 11–01–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಸಿ.ಟಿ. ನಾರಾಯಣಸ್ವಾಮಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ,

ಪಿಆರ್–393

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ಮೈಸೂರು ಜಿಲ್ಲೆ, ಟಿ.ನರಸೀಪುರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 1052.00 ಲಕ್ಷಗಳಲ್ಲಿ ಕಲ್ಪಿಸುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ : ಕಜಮಂ/ತಾಂತ್ರಿಕ/ಮುಅ/ಆಶ್ರೇ.ಉಮುಅ–1/ಟಿ.ನರಸೀಪುರ/3148/2008–09 ದಿನಾಂಕ : 05–01–2009

**ಪ್ರಸ್ತಾವನೆ :**

ಟಿ. ನರಸೀಪುರ ಪಟ್ಟಣವು ಮೈಸೂರು ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಇಲ್ಲಿಯ ಜನಸಂಖ್ಯೆಯ 2001ರ ಜನಗಣತಿಯಂತೆ 22,022 ಇದ್ದು 2036 ರಲ್ಲಿ 45,760 ಜನಸಂಖ್ಯೆ ನಿರೀಕ್ಷಿಸಿ ಯೋಜನೆಯನ್ನು ವಿನ್ಯಾಸಗೊಳಿಸಲಾಗಿದೆ. ಟಿ.ನರಸೀಪುರ ಪಟ್ಟಣಕ್ಕೆ ಕಬಿನಿ ನದಿಯಿಂದ ಪ್ರಸ್ತುತ 70 ಎಲ್.ಪಿ.ಸಿ.ಡಿ. ನೀರು ಸರಬರಾಜು ಮಾಡುತ್ತಿದ್ದು, ಯೋಜನೆಯು ಪೂರ್ಣಗೊಂಡ ನಂತರ ತಲಾ ದಿನಂ ಪ್ರತಿ 100 ಲೀಟರ್ ನೀರು ಸರಬರಾಜು ಮಾಡಲು ಉದ್ದೇಶಿಸಿದೆ.

ಪ್ರಸ್ತುತ ಈ ಪಟ್ಟಣಕ್ಕೆ ಯಾವುದೇ ಒಳಚರಂಡಿ ವ್ಯವಸ್ಥೆ ಇಲ್ಲದಿರುವುದರಿಂದ ಕಲುಷಿತ ನೀರು ರಸ್ತೆ ಬದಿಯ ಚರಂಡಿಗಳ ಮೂಲಕ ಹರಿದು ನೇರವಾಗಿ ನದಿಯನ್ನು ಸೇರುತ್ತಿರುವುದರಿಂದ ಬೇಸಿಗೆಯಲ್ಲಿ ನದಿಯ ನೀರಿನ ಹರಿವು ಕಡಿಮೆಯಾಗಿ ಪರಿಸರವನ್ನು ಕಲುಷಿತಗೊಳಿಸುತ್ತಿದೆ. ಪಟ್ಟಣಕ್ಕೆ ಕುಡಿಯುವ ನೀರನ್ನು ಸದರಿ ನದಿಯಿಂದಲೇ

ಪಡೆಯುತ್ತಿರುವುದರಿಂದ ನೀರು ಬಳಸುವುದು ಸಹ ಕಷ್ಟವಾಗುತ್ತದೆ. ಆದ್ದರಿಂದ ಕಲುಷಿತ ನೀರನ್ನು ನದಿಗೆ ಹರಿಯುವುದನ್ನು ತಡೆಯುವ ಸಲುವಾಗಿ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವುದು ಅತ್ಯವಶ್ಯಕವೆಂದು ಭಾವಿಸಿ ಅಂದಾಜು ತಯಾರಿಸಲಾಗಿದೆ.

2008–09ನೇ ಸಾಲಿನ ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ ದರಪಟ್ಟಿ ಅನುಸಾರ ಯೋಜನೆಯ ಅಂದಾಜನ್ನು ರೂ. 1052.00 ಲಕ್ಷಗಳಿಗೆ ಸಿದ್ದಪಡಿಸಿದ್ದು, ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಒಳಚರಂಡಿ ಯೋಜನೆ ಶೀರ್ಷಿಕೆಯಡಿ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ಕೋರಿ ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿರವರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | | |
|---|---|---|
| ಆರ್ಥಿಕ ಸಂಸ್ಥೆಗಳ ಸಾಲ | 50% | ರೂ. 526.00 ಲಕ್ಷಗಳು |
| ಕರ್ನಾಟಕ ಸರ್ಕಾರದ ಸಾಲ | 30% | ರೂ. 315.00 ಲಕ್ಷಗಳು |
| ಪಟ್ಟಣ ಪಂಚಾಯತಿಯಿಂದ | 20% | ರೂ. 210.40 ಲಕ್ಷಗಳು |
| | | **ಒಟ್ಟು ರೂ. 1052.00 ಲಕ್ಷಗಳು** |

ಸದರಿ ಯೋಜನೆಯನ್ನು 2009–10ನೇ ಸಾಲಿನ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಕ್ರಿಯಾ ಯೋಜನೆಯ ಪ್ರವರ್ಗ–'ಡಿ' ಯಡಿಯಲ್ಲಿ ಸೇರಿಸಿ ಪ್ರಸ್ತುತ ಸಾಲಿನಲ್ಲಿ ರೂ. 351.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಮಂಡಳಿಯ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 03 ಯುಡಿಎಸ್ 2009, ಬೆಂಗಳೂರು, ದಿನಾಂಕ 08ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆ, ಟಿ.ನರಸೀಪುರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 1052.00 ಲಕ್ಷಗಳಲ್ಲಿ (ರೂ. ಒಂದು ಸಾವಿರದ ಐವತ್ತೆರಡು ಲಕ್ಷಗಳು ಮಾತ್ರ) ಕಲ್ಪಿಸುವ ಯೋಜನೆಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು "ಒಳಚರಂಡಿ ಯೋಜನೆಯಡಿ" ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. No escalation charges are allowed and the estimates should be revised accordingly.
2. Water rates as proposed by KUWS & DB have to be implemented to meet O & M cost.
3. KTPP provisions, quality control and timely completion of the project should be ensured.
4. ETP and WCE and contingencies all together should be within 5% and the estimates should be revised accordingly.
5. ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000 ನ್ನು ಪಾಲಿಸುವುದು.
6. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 07 Exp-9 : 2010, ದಿನಾಂಕ : 08–01–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಸಿ.ಟಿ. ನಾರಾಯಣಸ್ವಾಮಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,

ಪಿಆರ್–394

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೈಲಹೊಂಗಲ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 5700.00 ಲಕ್ಷಗಳಲ್ಲಿ ಕಲ್ಪಿಸುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ :ಕಜಮಂ/ ಮುಅ(ಉ)/ಉಮುಅ1/ತಾಸ4/ಸ.ಅ.2/ಒಚಯೋ/ಬೈಲಹೊಂಗಲ3726/ 2008–09 ದಿನಾಂಕ : 21–02–2009

**ಪ್ರಸ್ತಾವನೆ :**

ಬೈಲಹೊಂಗಲ ಪಟ್ಟಣವು ಬೆಳಗಾಂ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಮಲಪ್ರಭಾ ನದಿಯ ಎಡದಂಡೆ ಮೇಲಿರುತ್ತದೆ. ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿ ಪ್ರಕಾರ 43.215 ಇದ್ದು, ಪ್ರಸ್ತುತ 50,000 ಇರುತ್ತದೆ. ಈ

ಪಟ್ಟಣಕ್ಕೆ ಮಲಪ್ರಭಾ ನದಿಯ ಮೂಲದಿಂದ 3ನೇ ಹಂತದ ಕುಡಿಯುವ ನೀರಿನ ಯೋಜನೆಯನ್ನು 2041ರಲ್ಲಿ ನಿರೀಕ್ಷಿಸಿದ 1,05,000 ಜನಸಂಖ್ಯೆಗೆ ತಲಾ ದಿನಂಪ್ರತಿ 135 ಲೀಟರ್ ನಂತೆ ನೀರು ಸರಬರಾಜು ಮಾಡಲು ಅವಕಾಶ ಕಲ್ಪಿಸಿ ರೂ. 34.00 ಕೋಟಿಗಳಲ್ಲಿ, ಕೈಗೆತ್ತಿಕೊಳ್ಳಲು ಸರ್ಕಾರವು ದಿನಾಂಕ : 12–01–2009 ರಂದು ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶ ಹೊರಡಿಸಿದೆ.

ಪ್ರಸ್ತುತ ಬೈಲಹೊಂಗಲ ಪಟ್ಟಣದಲ್ಲಿ ಭಾಗಶಃ ಒಳಚರಂಡಿ ವ್ಯವಸ್ಥೆಯು ಸ್ಥಳೀಯ ಸಂಸ್ಥೆಯಿಂದ ಕೆಲವೇ ಬಡಾವಣೆಗಳಿಗೆ (613 ಮನೆಗಳು) ಒದಗಿಸಿದ್ದು ಉಳಿದಂತೆ ಒಳಚರಂಡಿ ತ್ಯಾಜ್ಯ ನೀರನ್ನು ಲಾಂಡ್ ಕೆ ನಾಲಾಗೆ ಬಿಡಲಾಗಿತ್ತಿದೆ. ಸ್ಥಳೀಯ ಸಂಸ್ಥೆಯಿಂದ ಒದಗಿಸಿರುವ ಒಳಚರಂಡಿ ವ್ಯವಸ್ಥೆಯ ಕೊಳವೆ ಮಾರ್ಗಗಳಲ್ಲಿ ಅನೇಕ ಅಡಚಣೆಗಳಾಗಿ ತ್ಯಾಜ್ಯ ನೀರು ಹೊರ ಹರಿದು ಪರಿಸರವನ್ನು ಹಾಳು ಮಾಡುತ್ತಿದೆ. ಪ್ರಸ್ತುತ ಈ ಪಟ್ಟಣಕ್ಕೆ 27 ವಾರ್ಡ್‌ಗಳಿದ್ದು, ಎಲ್ಲಾ ವಾರ್ಡ್‌ಗಳಿಗೂ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವುದು ಮತ್ತು ಹಾಲಿ ಇರುವ ವ್ಯವಸ್ಥೆಯ ಪರ್ಯಾಯವಾಗಿ ಬೇರೆ ಒಳಚರಂಡಿ ಕೊಳವೆ ಮಾರ್ಗಗಳನ್ನು ಅಳವಡಿಸುವುದು ಹಾಗೂ ತ್ಯಾಜ್ಯ ನೀರನ್ನು ಶುದ್ಧೀಕರಿಸುವುದು ಅವಶ್ಯಕವಾಗಿರುತ್ತದೆ.

ಅದರಂತೆ, 2008–09ನೇ ಸಾಲಿನ ಮಂಡಳಿ ಹಾಗೂ ಲೋಕೋಪಯೋಗಿ ಇಲಾಖೆಯ ದರಪಟ್ಟಿಯನ್ನಾಧರಿಸಿ ರೂ. 57.00 ಕೋಟಿಗಳಿಗೆ ಅಂದಾಜನ್ನು ಸಿದ್ಧ ಪಡಿಸಿ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ರವರು ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | | |
|---|---|---|
| ಆರ್ಥಿಕ ಸಂಸ್ಥೆಗಳ ಸಾಲ | 50% | ರೂ. 2850.00 ಲಕ್ಷಗಳು |
| ಕರ್ನಾಟಕ ಸರ್ಕಾರದ ಸಾಲ | 30% | ರೂ. 1710.00 ಲಕ್ಷಗಳು |
| ಸ್ಥಳೀಯ ಸಂಸ್ಥೆ ವಂತಿಕೆ | 20% | ರೂ. 1140.00 ಲಕ್ಷಗಳು |
| | **ಒಟ್ಟು** | **ರೂ. 5700.00 ಲಕ್ಷಗಳು** |

2009–10ನೇ ಸಾಲಿನ ಮಂಡಳಿಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಈ ಯೋಜನೆಯಲ್ಲಿ ಪ್ರವರ್ಗ–ಡಿ ಯಡಿಯಲ್ಲಿ ಸೇರಿಸಿ. ರೂ. 1900.00 ಲಕ್ಷಗಳ ಮೊತ್ತವನ್ನು ಅನುವು ಮಾಡಲಾಗಿದೆ.

ಮಂಡಳಿಯ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 08 ಯುಡಿಎಸ್ 2009, ಬೆಂಗಳೂರು, ದಿನಾಂಕ 08ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೈಲಹೊಂಗಲ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 5700.00 ಲಕ್ಷಗಳಲ್ಲಿ (ರೂ. ಐದು ಸಾವಿರದ ಏಳು ನೂರು ಲಕ್ಷಗಳು ಮಾತ್ರ) ಕಲ್ಪಿಸುವ ಯೋಜನೆಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು **"ಒಳಚರಂಡಿ ಯೋಜನೆಯಡಿ"** ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. No escalation charges are allowed and the estimates should be revised accordingly.
2. Water rates as proposed by KUWS & DB have to be implemented to meet O & M cost.
3. KTPP ad provisions, quality control and timely completion of the project should be ensured.
4. ETP and WCE and contingencies all together should be within 5% and the estimates should be revised accordingly.
5. ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000 ನ್ನು ಪಾಲಿಸುವುದು.
6. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 03 Exp-9 : 2010, ದಿನಾಂಕ : 08–01–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಸಿ.ಟಿ. ನಾರಾಯಣಸ್ವಾಮಿ)**

ಪಿಆರ್–395

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಶ್ರೀಮತಿ ಎಸ್. ಇಂದುಮತಿ, ಸರ್ಕಾರದ ಉಪ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರು ಬಯೋ–ಐಟಿ ಫೆಸಿಲಿಟಿ ಪ್ರಸ್ತಾವನೆ ಕುರಿತು ದೆಹಲಿಗೆ ಭೇಟಿ ನೀಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರ ಟಿಪ್ಪಣಿ ದಿನಾಂಕ 10–2–2010

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 10–02–2010ರ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿಗಳು ಕೇಂದ್ರ ಮಾಹಿತಿ ಮಂತ್ರಾಲಯದ ಉನ್ನತ ಅಧಿಕಾರಿಗಳನ್ನು ಭೇಟಿ ಮಾಡಿ ಐಬಿಎಬಿ ಸಂಸ್ಥೆಯ ಬಯೋ–ಐಟಿ ಫೆಸಿಲಿಟಿ ಪ್ರಸ್ತಾವನೆಯ ಬಗ್ಗೆ ಕೇಂದ್ರ ಸರ್ಕಾರದ ಅಧಿಕಾರಿಗಳನ್ನು ಭೇಟಿ ಮಾಡಲು ದಿನಾಂಕ 22–02–2010 ರಿಂದ 24–02–2010 ರವರೆಗೆ ದೆಹಲಿಗೆ ನಿಯೋಜಿಸಲು ನಿರ್ದೇಶಿಸಿರುತ್ತಾರೆ.

ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಾತಂಇ 06 ಡಿಐಎಸ್ 2010, ಬೆಂಗಳೂರು, ದಿನಾಂಕ:16–02–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀಮತಿ ಎಸ್. ಇಂದುಮತಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರು ಕೇಂದ್ರ ಸರ್ಕಾರದ ಮಾಹಿತಿ ತಂತ್ರಜ್ಞಾನ ಮಂತ್ರಾಲಯದ ಉನ್ನತ ಅಧಿಕಾರಿಗಳನ್ನು ಭೇಟಿ ಮಾಡಿ ಬಯೋ–ಐಟಿ ಫೆಸಿಲಿಟಿಯ ಪ್ರಸ್ತಾವನೆಯನ್ನು ತ್ವರಿತಗೊಳಿಸಲು ದಿನಾಂಕ 22–02–2010 ರಿಂದ 24–02–2010 ರವರೆಗೆ ದೆಹಲಿಗೆ ಹೋಗಿ ಬರಲು ಅನುಮತಿಸಿದೆ.

ಸದರಿ ಅಧಿಕಾರಿಯು ದಿನಾಂಕ 21–02–2010 ರಂದು ಕೇಂದ್ರ ಸ್ಥಾನ ಬಿಟ್ಟು ದಿನಾಂಕ 24–02–2010 ರಂದು ಕೇಂದ್ರ ಸ್ಥಾನಕ್ಕೆ ಹಿಂದಿರುಗುವಂತೆ ಆದೇಶಿಸಿದೆ, ಮತ್ತು ಸದರಿ ಅಧಿಕಾರಿಯ ಪ್ರವಾಸದ ಅವಧಿಯ ಗೈರುಹಾಜರಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸಿ, ಅಧಿಕಾರಿಯವರು ಪ್ರವಾಸದ ಅವಧಿಗೆ ನಿಯಮರೀತ್ಯ ಸಾರಿಗೆ ಭತ್ಯೆ, ದಿನ ಭತ್ಯೆ ಇತ್ಯಾದಿಗಳಿಗೆ ಅರ್ಹರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ. ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–07–1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.446

**ಎಮ್.ವಿ.ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಬೆಂಗಳೂರಿನ ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಹೋಮಿಯೋಪತಿ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೆ ಸ್ನಾತಕೋತ್ತರ ಪದವಿ ಪ್ರಾರಂಭಿಸಲು ವಿದ್ಯಾಲಯದ ಆಸ್ಪತ್ರೆಯನ್ನು 40 ಹಾಸಿಗೆಯಿಂದ 100 ಹಾಸಿಗೆ ಮಟ್ಟಕ್ಕೆ ಉನ್ನತೀಕರಿಸಲು ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/24/**ಬಿಯುಡಿ(1)/2007**–08, ದಿನಾಂಕ: 16–07–2008, 18–05–2009, 11–08–2009 ಹಾಗೂ **ಸಂಖ್ಯೆ** : ಆಯುಷ್/24/ಬಿಯುಡಿ(1)/2009–10, ದಿನಾಂಕ: 18–11–2009.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಷ್ ನಿರ್ದೇಶಕರ ಪತ್ರಗಳಲ್ಲಿ, ಕರ್ನಾಟಕದಲ್ಲಿ ಒಂದು ಸರ್ಕಾರಿ ಹೋಮಿಯೋಪತಿ ಮಹಾವಿದ್ಯಾಲಯವು ಕಾರ್ಯನಿರ್ವಹಿಸುತ್ತಿದ್ದು, ಸದರಿ ಮಹಾ ವಿದ್ಯಾಲಯದಲ್ಲಿ ಐದು ವಿಷಯಗಳಲ್ಲಿ ಸ್ನಾತಕೋತ್ತರ ಪದವಿ ತರಗತಿಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದ್ದು, ಇದಕ್ಕಾಗಿ ಕೇಂದ್ರದ ಸಿ.ಸಿ.ಹೆಚ್. (Central Council of Homoeopathy)

ನಿಯಮದಂತೆ ಕನಿಷ್ಠ 100 ಹಾಸಿಗೆಗಳ ಆಸ್ಪತ್ರೆಯು ಅಗತ್ಯವಾಗಿರುತ್ತದೆ. 40 ಹಾಸಿಗೆಗಳ ಆಸ್ಪತ್ರೆಯಲ್ಲಿ ಮಂಜೂರಾಗಿರುವ ಹುದ್ದೆಗಳು ಮತ್ತು ಸಿ.ಸಿ.ಹೆಚ್. ನಾರ್ಮ್ಸ್ ಪ್ರಕಾರ 100 ಹಾಸಿಗೆಗಳ ಆಸ್ಪತ್ರೆಗೆ ಅವಶ್ಯವಿರುವ ಹೆಚ್ಚುವರಿ ಅಧಿಕಾರಿ/ಸಿಬ್ಬಂದಿ ಹುದ್ದೆಗಳನ್ನು ಪ್ರಸ್ತಾವನಾ ಪ್ರಪತ್ರ (ಪ್ರಿಪೋಷಿಷನ್ ಸ್ಟೇಟ್‌ಮೆಂಟ್) ವನ್ನು ಸಲ್ಲಿಸುತ್ತಾ, ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2210–05–102–0–02 ಯೋಜನೆಯಡಿಯಲ್ಲಿ ಭರಿಸಲು ಕ್ರಮ ಕೈಗೊಳ್ಳಲಾಗುವುದು ಹಾಗೂ 2010–11ನೇ ಸಾಲಿಗೆ ಅವಶ್ಯಕ ಅನುದಾನವನ್ನು ಒದಗಿಸಿಕೊಳ್ಳಲಾಗುವುದೆಂದು ತಿಳಿಸಿರುತ್ತಾರೆ.

ಮುಂದುವರೆಸುತ್ತಾ, ಸದರಿ ಆಸ್ಪತ್ರೆಯನ್ನು ಮೇಲ್ದರ್ಜೆಗೇರಿಸಲು ಬೇಕಾದ ಸ್ಥಳವಕಾಶ ಹಾಗೂ ಇನ್ನಿತರೆ ಮೂಲಭೂತ ಸೌಕರ್ಯಗಳ ಲಭ್ಯತೆ ಬಗ್ಗೆ ಮಾಹಿತಿ ನೀಡುತ್ತಾ, ಪ್ರಿಪೋಸಿಷನ್ ಸ್ಟೇಟ್‌ಮೆಂಟ್‌ನಲ್ಲಿ ಕೋರಿರುವ ಹುದ್ದೆಗಳಿಗೆ ಮಂಜೂರಾತಿ ನೀಡುವುದರೊಂದಿಗೆ ಸದರಿ ಆಸ್ಪತ್ರೆಯನ್ನು 40 ರಿಂದ 100 ಹಾಸಿಗೆಗಳಿಗೆ ಮೇಲ್ದರ್ಜೆಗೇರಿಸಲು ಸರ್ಕಾರದ ಮಂಜೂರಾತಿ ನೀಡಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 210 ಪಿಟಿಡಿ 2009, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರಿನಲ್ಲಿರುವ ಸರ್ಕಾರಿ ಹೋಮಿಯೋಪತಿ ಮಹಾವಿದ್ಯಾಲಯದಲ್ಲಿ ಹೋಮಿಯೋಪತಿ ಶಿಕ್ಷಣ ಪಡೆಯುವ ವಿದ್ಯಾಕಾಂಕ್ಷಿಗಳ ಹಿತದೃಷ್ಟಿಯಿಂದ ಸ್ನಾತಕೋತ್ತರ ಪದವಿ ಆರಂಭಿಸಲು ಈಗಿರುವ 40 ಹಾಸಿಗೆಗಳ ಆಸ್ಪತ್ರೆಯನ್ನು 100 ಹಾಸಿಗೆಗಳಿಗೆ ಮೇಲ್ದರ್ಜೆಗೇರಿಸಲು ಅನುಮತಿಸಿದೆ.

100 ಹಾಸಿಗೆಗಳ ಆಸ್ಪತ್ರೆಗೆ ಅನುಗುಣವಾಗಿ ಅಗತ್ಯವಿರುವ ಈ ಕೆಳಕಂಡ 39 ಹುದ್ದೆಗಳನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ, ಹೆಚ್ಚುವರಿಯಾಗಿ ಸೃಜಿಸಲು ಸರ್ಕಾರವು ಅನುಮತಿ ನೀಡಿದೆ. ಸದರಿ ಹುದ್ದೆಗಳ ಪೈಕಿ 20 ಬೋಧಕ ಸಿಬ್ಬಂದಿಯ ವೇತನ ಭತ್ಯೆಯ ಪೂರ್ಣ ವೆಚ್ಚಗಳನ್ನು ಐದು ವರ್ಷದ ಅವಧಿಗೆ ಕೇಂದ್ರ ಸರ್ಕಾರದ ಸಹಾಯನುದಾನದಿಂದ ಭರಿಸುವುದು.

| ಕ್ರ.ಸಂ. | ಹುದ್ದೆಗಳ ಪದನಾಮ | ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| 1 | ಉಪ ವೈದ್ಯಕೀಯ ಅಧೀಕ್ಷಕರು | 14300–19250 | 1 |
| 2 | ವೈದ್ಯಾಧಿಕಾರಿಗಳು ದರ್ಜೆ–2 | 13000–23850 | 4 |
| 3 | ಶಸ್ತ್ರ ಚಿಕಿತ್ಸಕರು | 14050–25050 | 1 |
| 4. | ಅನಸ್ಥೇಟಿಸ್ಟ್ | 14050–25050 | 1 |
| 5 | ಸ್ತ್ರೀ ರೋಗ ಮತ್ತು ಪ್ರಸೂತಿ ತಜ್ಞರು | 14050–25050 | 1 |
| 6 | ಹಿರಿಯ ವೈದ್ಯರು (ಔಷಧಿ) | 14050–25050 | 1 |
| 7 | ಕ್ಷ–ಕಿರಣ ತಜ್ಞರು (ರೇಡಿಯಾಲಜಿಸ್ಟ್) | 14050–25050 | 1 |
| 8 | ಪೆಥಾಲಿಜಿಸ್ಟ್ | 14050–25050 | 1 |
| 9 | ಬಯೋಕೆಮಿಸ್ಟ್ | 14050–25050 | 1 |
| 10 | ಹೌಸ್ ಸ್ಟಾಫ್ / ವೈದ್ಯರು ದರ್ಜೆ–2 | 13000–23850 | 8 |
| 11 | ರೇಡಿಯೋಗ್ರಾಫರ್ | 7275–13350 | 1 |
| 12 | ಪ್ರಯೋಗ ಶಾಲಾ ತಂತ್ರಜ್ಞರು | 7275–13350 | 1 |
| 13 | ಕ್ಷ–ಕಿರಣ ತಂತ್ರಜ್ಞರು | 7275–13350 | 1 |
| 14 | ಡ್ರೆಸ್ಸರ್ | 5200–8200 | 2 |
| 15 | ಮೆಟ್ರನ್ / ದಾದಿಯರ ಅಧೀಕ್ಷಕರು ದರ್ಜೆ–2 | 10800–20025 | 1 |
| 16 | ಶುಶ್ರೂಷಕಿಯರು | 8825–16000 | 14 |
| | **ಒಟ್ಟು** | | **40** |
| | ಈಗಾಗಲೇ ಮಂಜೂರಾಗಿರುವ ವೇತನ ಶ್ರೇಣಿ ರೂ.7275–13350ರ ನಾಲ್ಕು ಔಷಧಿ ವಿತರಕರ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ರದ್ದುಗೊಳಿಸಲಾಗಿದೆ. | | –1 |
| | ಒಟ್ಟು | | **39** |

ಕ್ರ.ಸಂ. (1)ನ್ನು ಹೊರತುಪಡಿಸಿ ಉಳಿದ ಮೇಲಿನ ಹುದ್ದೆಗಳನ್ನು ನೇರ ನೇಮಕಾತಿಯಿಂದ ತುಂಬತಕ್ಕದ್ದು. The Karnataka Indian Systems of Medicine & Homeopathy (Collegiate Branch of Homeopathy) (Recruitment) Rules, 1994 ನಿಯಮಗಳಿಗೆ ಸೂಕ್ತ ತಿದ್ದುಪಡಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 1476 ವೆಚ್ಚ – 5 / 2009, ದಿನಾಂಕ : 02–01–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.447

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ : ಆಕುಕ 718 ಹೆಚ್‌ಎಸ್‌ಹೆಚ್ 2008, ಬೆಂಗಳೂರು, ದಿನಾಂಕ 06–02–2010**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ವೃಂದದ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿಗಳಿಗೆ ಹೆಚ್ಚುವರಿಯಾಗಿ ವಿವಿಧ ಭತ್ಯೆಗಳನ್ನು ಮಂಜೂರು ಮಾಡಿ ಹೊರಡಿಸಲಾದ ಆದೇಶ ಸಂಖ್ಯೆ: ಆಕುಕ 718 ಹೆಚ್‌ಎಸ್‌ಹೆಚ್ 2008 ದಿನಾಂಕ 10–12–2009ರ ಆದೇಶ ಭಾಗದ ಮೊದಲ ಕಂಡಿಕೆಯ ಮೂರನೇ ಸಾಲಿನಲ್ಲಿ " ತಕ್ಷಣದಿಂದ ಜಾರಿಗೆ ಬರುವಂತೆ" ಎಂಬುದರ ಬದಲಾಗಿ "ದಿನಾಂಕ 01–10–2009 ರಿಂದ ಜಾರಿಗೆ ಬರುವಂತೆ" ಎಂದು ಓದಿಕೊಳ್ಳತಕ್ಕದ್ದು.

ಮುಂದುವರೆದು, ಸದರಿ ಆದೇಶದಲ್ಲಿ "ವಿವರಣೆ" ಕಂಡಿಕೆ ನಂತರ ಈ ಕೆಳಕಂಡ ಕಂಡಿಕಯೆನ್ನು ಸೇರ್ಪಡೆಯಾಗಿ ಓದಿಕೊಳ್ಳತಕ್ಕದ್ದು.

"ಅಕ್ಟೋಬರ್ 2009 ಮತ್ತು ನವೆಂಬರ್ 2009ರ ಭತ್ಯೆಗಳ ಬಾಕಿ ಮೊತ್ತವನ್ನು ಬಳ್ಳಾರಿ ನಗರದಲ್ಲಿ ನಿರ್ಮಾಣಗೊಳ್ಳಲಿರುವ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯಲ್ಲಿನ ಒಂದು ಸಂಕೀರ್ಣವನ್ನು ನಿರ್ಮಿಸುವ ಸಲುವಾಗಿ ಕರ್ನಾಟಕ ರಾಜ್ಯ ಸರ್ಕಾರಿ ವೈದ್ಯಾಧಿಕಾರಿಗಳ ಸಂಘದ ದೇಣಿಗೆಯಾಗಿ ಮುರಿದುಕೊಳ್ಳತಕ್ಕದ್ದು.

" ಮೇಲಿನ ಉದ್ದೇಶಕ್ಕಾಗಿ ಎರಡು ತಿಂಗಳ ಬಾಕಿ ಭತ್ಯೆಗಳ ಮೊತ್ತವನ್ನು ತಮ್ಮ ವೇತನ ಬಾಕಿ ಬಿಲ್ಲಿನಿಂದ ಕಟಾಯಿಸುವಂತೆ ಎಲ್ಲಾ ವೈದ್ಯಾಧಿಕಾರಿಗಳು ಸಂಬಂಧಪಟ್ಟ ವೇತನ ಸೆಳೆಯುವ ಅಧಿಕಾರಿಗಳಿಗೆ ಅವರಿಗೆ ತಿಳುವಳಿಕೆ ನೀಡಿದ ಒಂದು ವಾರದೊಳಗೆ ತಮ್ಮ ಒಪ್ಪಿಗೆಯನ್ನು ಲಿಖಿತ ಮೂಲಕ ನೀಡಲು ಸೂಚಿಸಲಾಗಿದೆ. ಒಂದು ವಾರದೊಳಗೆ ಅವರ ಆಭ್ಯಂತರ/ಒಪ್ಪಿಗೆ ಪತ್ರ ಬಾರದಿದ್ದಲ್ಲಿ ಯಾವುದೇ ಅಭ್ಯಂತರವಿಲ್ಲವೆಂದು ಪರಿಗಣಿಸಿ, ಮೇಲ್ಕಂಡ ಉದ್ದೇಶಕ್ಕೆ ಸದರಿ ಬಾಕಿ ಮೊತ್ತವನ್ನು ಉಪಯೋಗಿಸಿಕೊಳ್ಳಲಾಗುವುದು.

"ಆದರೆ, ಈ ಎರಡು ತಿಂಗಳ ಬಾಕಿ ಭತ್ಯೆ ಮೊತ್ತವನ್ನು ವೈದ್ಯಾಧಿಕಾರಿಗಳ ವೇತನ ಬಿಲ್ಲುಗಳಿಂದ ಕಟಾಯಿಸಿ ಯಾವ ಲೆಕ್ಕಕ್ಕೆ ಜಮೆ ಮಾಡಬೇಕೆಂದು ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಉಳಿದಂತೆ, ಮಂಜೂರಾಗಿರುವ ಹೆಚ್ಚುವರಿ ಭತ್ಯೆಗಳ ಆರ್ಥಿಕ ಸೌಲಭ್ಯವನ್ನು ನೀಡಲು ಆದೇಶಿಸಿದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.448

**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು–1)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಾರಕ್ ಉಲ್ಲಾ ಹುಸ್ಯೆನಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಾಲೂರು ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ, ತೃಪ್ತಿಕರವೆಂದು ಘೋಷಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03–05–2006.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ ಸಿಶಾ.1/20/2006–07, ದಿನಾಂಕ 02–11–2009.

**ಪ್ರಸ್ತಾವನೆ :**

ಶ್ರೀ ಬಾರಕ್ ಉಲ್ಲಾ ಹುಸ್ಯೆನಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಾಲೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 03–05–2006ರ (ಕ್ರ.ಸಂ.16) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ 09–05–2006ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಅಧಿಕಾರಿಯ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯು ದಿನಾಂಕ 08–05–2008ಕ್ಕೆ ಪೂರ್ಣಗೊಂಡಿರುತ್ತದೆ. ಹುದ್ದೆಗೆ ನಿಗಧಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಒಂದಾದ ಕನ್ನಡ ಭಾಷಾ ಪರೀಕ್ಷೆಯನ್ನು ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣತೆ ಹೊಂದದೆ, ನಂತರ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣತೆ ಹೊಂದಿರುತ್ತಾರೆ. ಸದರಿ ಪರೀಕ್ಷಾ ಫಲಿತಾಂಶವು ದಿನಾಂಕ 02–07–2009ರ ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುತ್ತದೆ. ಉಳಿದ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1ನ್ನು ಪರೀಕ್ಷೆಗಳನ್ನು ಪರಿವೀಕ್ಷಣಾ ಅವಧಿಯೊಳಗೆ ಪಾಸು ಮಾಡಿರುತ್ತಾರೆ.

2. ಈ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07, 2007–08 ಮತ್ತು 2008–09ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಅಧಿಕಾರಿಯವರು ಸದರಿ ಅವಧಿಯಲ್ಲಿ ಇಲಾಖೆಯ ಅವಕೃಪೆಗೆ ಒಳಗಾಗಿರುವುದಿಲ್ಲ ಮತ್ತು ಇವರ ಮೇಲೆ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಹಾಗೂ ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

3. ಆದುದರಿಂದ ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4ರ ಉಪ ನಿಯಮ 1(i)ರ ಅನ್ವಯ ದಿನಾಂಕ 09–05–2008 ರಿಂದ 02–07–2009ರವರೆಗೆ ವಿಸ್ತರಿಸಿ, ಸದರಿ ನಿಯಮಾವಳಿಯ ನಿಯಮ 5(1)(ಎ)ರ ಅನುಸಾರ ದಿನಾಂಕ 03–07–2009ರಿಂದ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 448 ಪಿಪಿಇ 2009, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1)( i) ರನ್ವಯ ಶ್ರೀ ಬಾರಕ್ ಉಲ್ಲಾ ಹುಸ್ಯೆನಿ, ಸಹಾಯಕ ಸರ್ಕಾರಿ ಅಭಿಯೊಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಾಲೂರು ಅವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 09–05–2008 ರಿಂದ 02–07–2009 ರವರೆಗೆ ವಿಸ್ತರಿಸಿ, 1977ರ ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ)ರ ಅನ್ವಯ ದಿನಾಂಕ 03–07–2009ರಂದು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.449

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎನ್.ಎಸ್. ಮಲ್ಲಯ್ಯ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸದುರ್ಗ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03–05–2006.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎಸ್/ಸಿಶಾ.1/37/2008–09, ದಿನಾಂಕ 03–11–2009.

**ಪ್ರಸ್ತಾವನೆ :**

ಶ್ರೀ ಎನ್.ಎಸ್. ಮಲ್ಲಯ್ಯ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸದುರ್ಗ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 03–05–2006ರ (ಕ್ರ.ಸಂ.43) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ 16–05–2006ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ದಿನಾಂಕ 15–05–2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯು ಮುಕ್ತಾಯಗೊಂಡಿರುತ್ತದೆ. ಈ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ಹುದ್ದೆಗೆ ನಿಗದಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗದೇ ಇರುವುದರಿಂದ, ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿದೆ ಎಂದು ಘೋಷಿಸಲು ಸಾಧ್ಯವಿರುವುದಿಲ್ಲ. ಆದುದರಿಂದ ದಿನಾಂಕ 16–05–2008ರಿಂದ ದಿನಂಕ 15–05–2010 ರವರೆಗೆ ಕರ್ನಾಟಕ ಸರ್ಕಾರಿ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)( i)ರ ರೀತ್ಯಾ ವಿಸ್ತರಣೆ ಮಾಡಬಹುದಾಗಿದೆ ಎಂದು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 453 ಪಿಪಿಇ 2009, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1)( i) ರನ್ವಯ ಶ್ರೀ ಎನ್.ಎಸ್. ಮಲ್ಲಯ್ಯ, ಸಹಾಯಕ ಸರ್ಕಾರಿ ಅಭಿಯೊಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸದುರ್ಗ ಅವರ ಪರಿವೀಕ್ಷಣಾ ಅವಧಿಯನ್ನು ಮೊದಲ ಬಾರಿಗೆ ದಿನಾಂಕ 16–05–2008 ರಿಂದ 15–05–2010 ರವರೆಗೆ ವಿಸ್ತರಿಸಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.450

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ಕಂದಾಯ ಸಚಿವಾಲಯ**

ತಿದ್ದುಪಡಿ

ಸಂಖ್ಯೆ : ಕಂಇ 27 ಮುನೋಮು 2010, ಬೆಂಗಳೂರು ದಿನಾಂಕ 04–02–2010

ದಿನಾಂಕ: 26–05–2007 ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 198 ಮುನೋಮು 2007 ರಲ್ಲಿನ ಅದೇಶದ ಅನುಬಂಧ –1 ರ ಕ್ರಮ ಸಂಖ್ಯೆ: 22 ರಲ್ಲಿ ಬೆಳೆಗಾವಿ ಜಿಲ್ಲೆಗೆ ಸಂಬಂಧಿಸಿದಂತೆ ವಲಯ 2 ರಲ್ಲಿನ "ಬೈಲಹೊಂಗಲ" ಎಂಬ ಪದದ ನಂತರ "ನಿಪ್ಪಾಣಿ" ಎಂಬ ಪದದ ಬದಲಾಗಿ 'ಚಿಕ್ಕೋಡಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಟಿ.ಕೆ. ರಾಮಚಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

ಪಿಆರ್–466

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು ಹಾಗೂ ಇತರೆ ಸಿಬ್ಬಂದಿ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕುರಿತು–ಆರೋಪದಿಂದ ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ :**

1) ತುಮಕೂರು ಜಿಲ್ಲಾಧಿಕಾರಿಗಳ ಪತ್ರ ಸಂ. ಸಿಬ್ಬಂದಿ (1) ಸಿಸಿಎ:ವಿವ:5/ 2004–05, ದಿನಾಂಕ : 17–07–2004, 30–11–2004
2) ಸರ್ಕಾರದ ಆದೇಶ ಸಂ. ಕಂಇ 51 ಎಡಿಇ 2004, ದಿನಾಂಕ : 23—08–2004.
3) ಸರ್ಕಾರದ ಆದೇಶ ಸಂ. ಕಂಇ 51 ಎಡಿಇ 2004, ದಿನಾಂಕ : 27—01–2005.
4) ಸರ್ಕಾರದ ಆದೇಶ ಸಂ. ಕಂಇ 71 ಬಿಎಂಎಂ 2005, ದಿನಾಂಕ : 04–02–2005.
5) ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ತಹಶೀಲ್ದಾರ್ ಮತ್ತು ಇತರ ನೌಕರರಿಗೆ ನೀಡಿರುವ ತಿಳುವಳಿಕೆ ಪತ್ರ ಸಂ: ಕಂ:ಇ:51ಎಡಿಇ04 ದಿನಾಂಕ 02–03–2005
6) ಸರ್ಕಾರದ ಆದೇಶ ಸಂ: ಕಂಇ 51 ಎಡಿಇ 2004, ದಿನಾಂಕ: 02—01–2006.
7) ಶ್ರೀ ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರ ಮನವಿ ದಿನಾಂಕ 09–01–2006.
8) ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 51 ಎಡಿಇ 2004, ದಿನಾಂಕ : 09–09–2008.
9) ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಮತ್ತು ಸೆಷನ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳ ವರದಿ ದಿನಾಂಕ : 15–12–2009.

**ಪ್ರಸ್ತಾವನೆ :**

ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು ಮತ್ತಿತರ 4 ಮಂದಿ ಸಿಬ್ಬಂದಿಯವರು ಶ್ರೀ ಲೋಕೇಶ್ ಬಿನ್ ಕೆ.ಬಿ. ಬಸವರಾಜು ಇವರಿಗೆ ನಿಯಮ ಉಲ್ಲಂಘಿಸಿ ಅಕ್ರಮವಾಗಿ ಬಿಸಿಎಂ (ಬಿ) ದೃಢೀಕರಣ ಪತ್ರವನ್ನು ನೀಡಿ ಕರ್ತವ್ಯಲೋಪ ಎಸಗಿರುವುದರಿಂದ ಸದರಿಯವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕರಡು ದೋಷಾರೋಪಣೆಗಳನ್ನು ತಯಾರಿಸಿ ಮೇಲೆ ಕ.ಸಂ. (1)ರಲ್ಲಿ ಓದಲಾದ ಪತ್ರದಲ್ಲಿ ತುಮಕೂರು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಮೇಲೆ ಕ್ರ. ಸಂ. (2) ರಲ್ಲಿ ಓದಲಾದ ದಿ: 23–08–2004ರ ಅದೇಶದಲ್ಲಿ (1) ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್ (2) ಶ್ರೀ ಕೆ. ವಾಸುದೇವರಾಜ್, ಚುನಾವಣಾ ಶಿರಸ್ತೇದಾರ್, (3) ಶ್ರೀ ಬಿ.ಎಂ. ಗಂಗರಾಜ್, ಹಿಂದಿನ ರಾಜಸ್ವ ನಿರೀಕ್ಷಕರು, ಕಸಬಾ ಹೋಬಳಿ, ಕೊರಟಗೆರೆ ತಾಲ್ಲೂಕು, (4) ಶ್ರೀ ಸಿ.ಎಸ್. ತಿಮ್ಮಯ್ಯ, ಕಂದಾಯ ತನಿಖಾಧಿಕಾರಿ, ಕಸಬಾ ಹೋಬಳಿ, ಕೊರಟಗೆರೆ ತಾಲ್ಲೂಕು (5) ಶ್ರೀ ಕೆಂಪರಾಮಯ್ಯ ಗ್ರಾಮಲೆಕ್ಕಿಗರು, ತುಂಬಾಡಿವೃತ್ತ, ಕೊರಟಗೆರೆ ತಾಲ್ಲೂಕು ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಸೇವೆಯಿಂದ ಅಮಾನತ್ತು ಮಾಡಿ ಆದೇಶ ಹೊರಡಿಸಲಾಗಿತ್ತು. ಕ್ರ.ಸಂ. (3) ಮತ್ತು ಕ್ರ.ಸಂ. (4) ರಲ್ಲಿ ಓದಲಾದ ದಿನಾಂಕ 27–01–2005 ಮತ್ತು 04–02–2005ರ ಆದೇಶದಲ್ಲಿ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್ ಹಾಗೂ ಸಿಬ್ಬಂದಿ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಅಮಾನತ್ತನ್ನು ತೆರವುಗೊಳಿಸಿ ಆದೇಶ ಹೊರಡಿಸಲಾಗಿತ್ತು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ) ನಿಯಮ 13ರಡಿಯಲ್ಲಿ ದೋಷಾರೋಪಣೆಯನ್ನು (ಅನುಬಂಧ 1 ರಿಂದ 4 ರವರೆಗೆ) ಆರೋಪಿತ ಅಧಿಕಾರಿ/ನೌಕರರಿಗೆ ಜಾರಿ ಮಾಡಿ ಆರೋಪಗಳ ಲಿಖಿತ ಹೇಳಿಕೆ ಸಲ್ಲಿಸಲು, ಕ್ರ.ಸಂ. (5)ರ ದಿನಾಂಕ 02–03–2005ರಲ್ಲಿ ಸದರಿ ನೌಕರರಿಗೆ ನೋಟೀಸ್ ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು ಆಪಾದಿತ ಅಧಿಕಾರಿ/ ನೌಕರರಲ್ಲಿ ಶ್ರೀಮತಿ ಭಾಗ್ಯವತಮ್ಮ ಶ್ರೀ ವಾಸುದೇವರಾಜ್, ಶ್ರೀ ಬಿ.ಎಂ. ಗಂಗರಾಜು ಮತ್ತು ಶ್ರೀ ಕೆಂಪರಾಮಯ್ಯರವರುಗಳು ತಮ್ಮ ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಉಳಿದ ನೌಕರರಾದ ಶ್ರೀ ಸಿ.ಎಸ್. ತಿಮ್ಮಯ್ಯ ಇವರು ಭಾಗಶ: ಉತ್ತರ ನೀಡಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಶ್ರೀ ಎನ್. ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರಸ್ಥಾನಿಕ ಸಹಾಯಕರು, ತುಮಕೂರು ಜಿಲ್ಲಾಧಿಕಾರಿಗಳ ಕಛೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರ.ಸಂ. (6), ದಿನಾಂಕ: 02–01–2006 ರಲ್ಲಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (7) ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ವಿಚಾರಣಾಧಿಕಾರಿಗಳು ತಮಗೆ ತೆರೆದ ಹೃದಯ ಚಿಕಿತ್ಸೆ ಆಗಿರುವುದರಿಂದ, ವಿಚಾರಣೆಯನ್ನು ಬೆಂಗಳೂರಿನಲ್ಲಿ ನಡೆಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ. ಸದರಿ

ವಿಚಾರಣಾಧಿಕಾರಿಗಳ ಮನವಿಯನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಲಕ್ಷ್ಮೀನರಸಿಂಹಯ್ಯ ಇವರ ಬದಲಿಗೆ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನೆಡೆಸಲು ನಿರ್ಧರಿಸಿ, ಮೇಲೆ ಓದಲಾದ ಕ್ರ.ಸಂ. (8)ರ ದಿನಾಂಕ: 09–09–2008ರಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯೋಜಿಸಲಾಗಿದ್ದ ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ವಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ಬದಲಿಗೆ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 239/1, 4ನೇ ಮುಖ್ಯ ರಸ್ತೆ, ನಾಗಶ್ರೀ, ಚಾಮರಾಜಪೇಟೆ, ಬೆಂಗಳೂರು–560018 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ ಸಂ. (9) ದಿನಾಂಕ: 15–12–2009ರಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಬಿ.ಎಲ್. ಶ್ರೀಕಂಠಯ್ಯ ಇವರು ಈ ಪ್ರಕರಣದ ಜಂಟಿ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಶ್ರೀಮತಿ ಭಾಗ್ಯವತಮ್ಮ, ತಹಶೀಲ್ದಾರ್ ಹಾಗೂ ಇತರರ ವಿರುದ್ಧ ಹೊರಿಸಿದ ಅಪಾದನೆ ಏನೆಂದರೆ ಕೊರಟಗೆರೆ ಟೌನ್ ನಿವಾಸಿಯಾದ ಶ್ರೀ ಕೆ.ಬಿ. ಲೋಕೇಶ್ ಬಿನ್ ಕೆ.ಬಿ. ಬಸವರಾಜು ತಾಲ್ಲೂಕು ಪಂಚಾಯತಿ ಅಧ್ಯಕ್ಷರ ಚುನಾವಣಾ ಸಂಬಂಧ ಸರ್ಕಾರದ ಪ್ರಕಟಣೆ ಸಂ ಆರ್‌ಡಿಪಿ 5 ಝಪಿಎಸ್ 95(1) ದಿನಾಂಕ 13–01–1995 ರಲ್ಲಿನ ನಿಯಮಗಳನ್ನು ಉಲ್ಲಂಘಿಸಿ ಬಿ.ಸಿ.ಎಂ ದೃಢೀಕರಣ ಪತ್ರವನ್ನು ನೀಡಿದ್ದು ಸರ್ಕಾರದ ಪ್ರಕಟಣೆಯಲ್ಲಿ ಮಾರಾಟ ತೆರಿಗೆ ಪಾವತಿದಾರರೆಂಬ ನಿರ್ದಿಷ್ಟ ಸೂಚನೆ ಇದ್ದರೂ ಅದನ್ನು ಪರಿಶೀಲಿಸದೇ ದೃಢೀಕರಣ ಪತ್ರವನ್ನು ನೀಡಿ ಕರ್ತವ್ಯಲೋಪವೆಸಗಿದ ಆಪಾದನೆ ಮೇಲೆ ಇಲಾಖಾ ವಿಚಾರಣೆ ನಡೆಸಲಾಗಿರುತ್ತದೆ. ವಿಚಾರಣೆಯಲ್ಲಿ ಆಪಾದಿತರ ವಿರುದ್ಧ ದಾಖಲೆ ಹಾಗೂ ಸಾಕ್ಷಿಗಳನ್ನು ಮಂಡನಾಧಿಕಾರಿಗಳು ಮಂಡಿಸದೇ ಇರುವುದರಿಂದ ಆಪಾದನೆಗಳು ಸಾಬೀತಾಗಿಲ್ಲವೆಂದು ವರದಿ ನೀಡಿದ್ದಾರೆ. ದಾಖಲೆಗಳನ್ನು ಪರಿಶೀಲಿಸಲಾಗಿ ಉಪವಿಭಾಗಾಧಿಕಾರಿಗಳೂ ಮಧುಗಿರಿ ಇವರು ಶ್ರೀ ಲೋಕೇಶ್ ಎಂಬುವವರು ಮಾರಾಟ ತೆರಿಗೆ ಪಾವತಿದಾರರಾಗಿರುವುದು ಖಚಿತವಾಗಿದ್ದು, ಅವರಿಗೆ ನೀಡಿರುವ ದೃಢೀಕರಣ ಪತ್ರವನ್ನು ರದ್ದುಗೊಳಿಸಿರುತ್ತಾರೆ. ಈ ಅಂಶವನ್ನು ಸರಿಯಾಗಿ ವಿಚಾರಣೆಯಲ್ಲಿ ಮಂಡನಾಧಿಕಾರಿಗಳು ಸಾಬೀತುಪಡಿಸದೇ ಇರುವುದರಿಂದ ಆಪಾದನೆಗಳು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ನೀಡಿರುತ್ತಾರೆ. ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿಲ್ಲವೆಂದು ವರದಿ ನೀಡಿರುವುದರಿಂದ ಈ ಕೆಳಕಂಡ ಆಪಾದಿತ ಅಧಿಕಾರಿ/ನೌಕರರ ವಿರುದ್ಧ ಹೂಡಲಾಗಿದ್ದ ಇಲಾಖಾ ವಿಚಾರಣೆಯಿಂದ ಕೈಬಿಡಲು ತೀರ್ಮಾನಿಸಿ ಈ ಕೆಳಕಂಡ ಆದೇಶ.

1) ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಹಿಂದಿನ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು.
2) ಶ್ರೀ ಕೆ. ವಾಸುದೇವರಾಜು, ಹಿಂದಿನ ಶಿರಸ್ತೇದಾರ್, ಕೊರಟಗೆರೆ ತಾಲ್ಲೂಕು. ಕಛೇರಿ.
3) ಶ್ರೀ ಬಿ. ಎಂ. ಗಂಗರಾಜು, ಹಿಂದಿನ ರಾಜಸ್ವ ನಿರೀಕ್ಷಕರು, ಕೊರಟಗೆರೆ, ಪ್ರಸ್ತುತ ನಿವೃತ್ತ
4) ಶ್ರೀ ಸಿ.ಎಸ್. ತಿಮ್ಮಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು, ಕೊರಟಗೆರೆ, ತಾಲ್ಲೂಕು.
5) ಶ್ರೀ ಕೆಂಪರಾಮಯ್ಯ ಹಿಂದಿನ ಗ್ರಾಮಲೆಕ್ಕಿಗರು, ಕೊರಟಗೆರೆ ತಾಲ್ಲೂಕು.

**ಸರ್ಕಾರದ ಆದೇಶ ಸಂ. ಆರ್‌ಡಿ 51 ಎಡಿಇ 2004, ಬೆಂಗಳೂರು, ದಿನಾಂಕ 11ನೇ ಫೆಬ್ರವರಿ, 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಹಿಂದಿನ ತಹಶೀಲ್ದಾರ್, ಕೊರಟಗೆರೆ ಹಾಗೂ ಸಿಬ್ಬಂದಿ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಿ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿ ಆಪಾದಿತ ಅಧಿಕಾರಿ/ನೌಕರರ ವಿರುದ್ಧ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ಮಾಡಿರುವುದರಿಂದ ಸದರಿ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿ ಈ ಪ್ರಕರಣದಲ್ಲಿ ಭಾಗಿಯಾಗಿದ್ದ ಈ ಕೆಳಕಂಡ ಅಧಿಕಾರಿ / ನೌಕರರ ವಿರುದ್ಧದ ಇಲಾಖಾ ವಿಚಾರಣೆ ಕೈಬಿಟ್ಟು ಆದೇಶಿಸಲಾಗಿದೆ.

1) ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಹಿಂದಿನ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು.
2) ಶ್ರೀ ಕೆ. ವಾಸುದೇವರಾಜು, ಹಿಂದಿನ ಶಿರಸ್ತೇದಾರ್, ಕೊರಟಗೆರೆ ತಾಲ್ಲೂಕು. ಕಛೇರಿ.
3) ಶ್ರೀ ಬಿ. ಎಂ. ಗಂಗರಾಜು, ಹಿಂದಿನ ರಾಜಸ್ವ ನಿರೀಕ್ಷಕರು, ಕೊರಟಗೆರೆ, ಪ್ರಸ್ತುತ ನಿವೃತ್ತ
4) ಶ್ರೀ ಸಿ.ಎಸ್. ತಿಮ್ಮಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು, ಕೊರಟಗೆರೆ, ತಾಲ್ಲೂಕು.
5) ಶ್ರೀ ಕೆಂಪರಾಮಯ್ಯ ಹಿಂದಿನ ಗ್ರಾಮಲೆಕ್ಕಿಗರು, ಕೊರಟಗೆರೆ ತಾಲ್ಲೂಕು.

ಮೇಲ್ಕಂಡ ಅಧಿಕಾರಿ/ನೌಕರರುಗಳು ಈ ಹಿಂದೆ ಕಳೆದ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಬಿ. ಸಸಾಲಟ್ಟಿ)**
ಸರ್ಕಾರದ ಆಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿಆರ್–467

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಮಹಮದ್ ಸಾದಿಕ್, ಹಿಂದಿನ ತಹಶೀಲ್ದಾರ್ ಸೊರಬ ತಾಲ್ಲೂಕು ಶಿವಮೊಗ್ಗ ಜಿಲ್ಲೆ (ಪ್ರಸ್ತುತ ನಿವೃತ್ತ) ಹಾಗೂ ಶ್ರೀ ಬಿ. ವಿಶ್ವನಾಥ್, ಹಿಂದಿನ ಉಪತಹಶೀಲ್ದಾರ್ ತಾಲ್ಲೂಕು ಕಛೇರಿ ಸೊರಬ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ :**
1) ಸಹಾಯಕ ನಿಬಂಧಕರು (ಕಾನೂನು ಅಭಿಪ್ರಾಯ–1) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅ.ಸ.ಪತ್ರ ಸಂ: Compt/Uplok /bd-251/2009, dated 08–12–09.
2) ಮಾನ್ಯ ಉಪಲೋಕಾಯುಕ್ತ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ವರದಿ ದಿನಾಂಕ: 10–11–2009

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ: 08–12–2009ರಲ್ಲಿ ಸಹಾಯಕ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮಾನ್ಯ ಉಪಲೋಕಾಯುಕ್ತರ ವರದಿಯಂತೆ ಕ್ರಮ ವಹಿಸಲು ಕೋರಿರುತ್ತಾರೆ, ಮೇಲೆ ಓದಲಾದ ಕ್ರ.ಸಂ. (2) ದಿನಾಂಕ 10–11–2009ರಲ್ಲಿ ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಸೆಕ್ಷನ್ 7(2) ರನ್ವಯ ಸ್ವಯಂ ಪ್ರೇರಿತ ವಿಚಾರಣೆ ನಡೆಸಿ, ಅರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇವರು ಹಾಜರುಪಡಿಸಿರುವ ದಾಖಲೆಗಳನ್ವಯ ದಿನಾಂಕ ; 30–11–2007 ರಂದು ಶ್ರೀ ಮಹಮದ್ ಸಾದಿಕ್, ತಹಶೀಲ್ದಾರ್ ಸೊರಬ ತಾಲ್ಲೂಕು ಮತ್ತು ಶ್ರೀ ಬಿ. ವಿಶ್ವನಾಥ್, ಶಿರಸ್ತೇದಾರ್ ತಾಲ್ಲೂಕು ಕಛೇರಿ ಸೊರಬ, ಶಿವಮೊಗ್ಗ ಜಿಲ್ಲೆ ಇವರುಗಳು ಕ್ರಮವಾಗಿ ರೂ. 2,000/– ಹಾಗೂ ರೂ. 500/–ಗಳ ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗ ಲೋಕಾಯುಕ್ತರು ಬೀಸಿದ ಬಲೆಗೆ ಸಿಕ್ಕಿ ಬಿದ್ದಿರುವುದರಿಂದ ಇವರುಗಳ ಮೇಲೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)ಡಿ ಜೊತೆಗೆ 13(2)ರ ಪ್ರಕಾರ ಶಿವಮೊಗ್ಗ ಲೋಕಾಯುಕ್ತ ಪೊಲೀಸ್ ಠಾಣೆ ಸಂ. 8/2007ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡದ್ದು ಹಾಗೂ ಆಪಾದನೆಯು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಅವರುಗಳಿಂದ ಹೇಳಿಕೆಗಳನ್ನು ಪಡೆದಿದ್ದು, ಅವುಗಳು ಒಪ್ಪುವಂತದ್ದಲ್ಲವೆಂದು ತಿಳಿಸುತ್ತಾ, ಶ್ರೀ ಮಹಮದ್ ಸಾದಿಕ್, ಹಿಂದಿನ ತಹಶೀಲ್ದಾರ್ ಸೊರಬ ಇವರು ಈಗಾಗಲೇ ದಿನಾಂಕ 30–04–2008ರಂದು ವಯೋ ನಿವೃತ್ತಿ ಹೊಂದಿರುವುದರಿಂದ ಕೆ.ಸಿ.ಎಸ್.ಆರ್ ನಿಯಮ 214ರಡಿ ಹಾಗೂ ಲೋಕಾಯುಕ್ತ ಕಾಯ್ದೆ ಸೆಕ್ಷನ್ 12(3) ರನ್ವಯ ಶಿಫಾರಸ್ಸು ಮಾಡಿ ಸದರಿಯವರ ವಿರುದ್ಧ ನಿಯಮ 14(ಎ) ರನ್ವಯ ಇಲಾಖಾ ವಿಚಾರಣೆ ನಡೆಸಲು ಉಪಲೋಕಾಯುಕ್ತರಿಗೆ ವಹಿಸಿಕೊಡುವಂತೆ ಕೋರಿರುತ್ತಾರೆ. ಅದರಂತೆ, ಸರ್ಕಾರವು ಮಾನ್ಯ ಉಪಲೋಕಾಯುಕ್ತರಿಗೆ ಇವರ ಶಿಫಾರಸ್ಸನ್ನು ಒಪ್ಪಿ ಈ ಪ್ರಕರಣದ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯಮ 14(ಎ) ರನ್ವಯ ಅವರಿಗೆ ವಹಿಸಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ. ಆರ್‌ಡಿ 45 ಎಡಿಇ 2007, ಬೆಂಗಳೂರು, ದಿನಾಂಕ 9ನೇ ಫೆಬ್ರವರಿ, 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಮಹಮದ್ ಸಾದಿಕ್, ಹಿಂದಿನ ತಹಶೀಲ್ದಾರ್ ಸೊರಬ ತಾಲ್ಲೂಕು ಪ್ರಸ್ತುತ ನಿವೃತ್ತ ಹಾಗೂ ಶ್ರೀ ಬಿ. ವಿಶ್ವನಾಥ್, ಹಿಂದಿನ ಶಿರಸ್ತೇದಾರ್ ತಾಲ್ಲೂಕು ಕಛೇರಿ ಸೊರಬ, ಇವರುಗಳ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214ರಡಿಯಲ್ಲಿ ಹಾಗೂ ನಿಯಮ 14(ಎ) ರನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಬಿ. ಸಸಾಲಟ್ಟಿ)**
ಸರ್ಕಾರದ ಆಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿಆರ್–468

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

## ತಿದ್ದುಪಡಿ

ಸಂಖ್ಯೆ : ಅಪಜೀ 138 ಎಫ್‌ಡಬ್ಲ್ಯೂಎಲ್ 2009, ಬೆಂಗಳೂರು ದಿನಾಂಕ 15–02–2010

ಸರ್ಕಾರದ ಆದೇಶ ಸಂಖ್ಯೆ : ಅಪಜೀ 138 ಎಫ್‌ಡಬ್ಲ್ಯೂಎಲ್ 2009, ದಿನಾಂಕ 03–12–2009ರ ಕ್ರಮ ಸಂಖ್ಯೆ: 17ರಲ್ಲಿ **"ಶ್ರೀ ನಿರೇನ್ ಜೈನ್, ಅರ್ಕಿಟೆಕ್ಟ್, ನೆಲಮಹಡಿ, ರತ್ನ ಅಪಾರ್ಟ್‌ಮೆಂಟ್, ಕದ್ರಿ, ಮಂಗಳೂರು–575 002"** ಎಂಬುದರ ಬದಲಾಗಿ **"ಶ್ರೀ ಪುದಿಯ ತಂಡ ಸೋಮಯ್ಯ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಕೊಡಗು ಜಿಲ್ಲೆ"** ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಪಿ.ಆರ್. ಕಲಾವತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿಆರ್–469

electricity to its consumers in its area of supply in the districts of Dharwad, Gadag, Haveri, Karwar, Belgaum, Bijapur and Bagalkot except Hukeri taluk in Belgaum District.

2. The company is committed to social obligation of energisation of rural water supply schemes, energisation of individual IP sets and also electrification of unelectrified households etc. Duing the year 2009-10 the Company has proposed to take up the Capex programme with a mandate to reduce Distribution losses by taking up the re-conductring work, providing meters to unmetered installations, DTCs and other works including systemic improvements to cater the rapidly growing demand in urban and rural areas among industrial and other users in North Karnataka region. The company is also taking up the Programme of Niranthara Jyothi works for providing 24 hours power supply to rural areas.

3. In letter read at (1) above, Managing Director, HESCOM has stated that the Company has taken Reform measures as under informing that these initiatives would definitely take forward the Company in meeting the goals set by it.

a) Setting up of Inventory management System, Transformer Management System, IT implementation Advisory Committee.
b) Massive awareness compaign on Consumer Awareness, theft and pilferage, Energy Auditing.
c) A comprehensive HRD policy to train and upgrade the skill of all employees.
d) To put in place a system of delegation of powers to field level officers to bring in more accountability and implementing speeding-up of consumer complaint redressal system.
e) Nirantara Jyothi works initially in 3 Taluks as pilot projects and proposed to take-up Nirantara Jyothi works in 20 Taluks in 2nd phase and in other remaining Taluks in 3rd phase, with an approximate cost of the project as Rs. 500 crores.

4. Managing Director, HESCOM vide letters read at (2) and (3) above has stated that, though the billing efficiency has been increased to 99% and collection efficiency is maintained at more than 105% in receivable categories, the average monthly revenue collection of HESCOM is less then the monthly revenue expenditure of HESCOM. The company is finding difficulty to meet the expenditure towards power purchase, debt servicing and Capex bills etc., and as such the company with the approval of its Board, has proposed to draw Long term loan of Rs. 500 Crores and Short term loan of Rs. 150 Crores respectively, as under and has requested the Government for furnishing Government Guarantee to ensure smooth carrying out of development activities in HESCOM

(Rs. In crores)

| Particulars | Loan | | Total |
|---|---|---|---|
| | Existing | Proposed | |
| Long Term Loan | 1472.83 | 500.00 | 1972.83 |
| Short Term Loan | 375.00 | 150.00 | 525.00 |
| **Total** | **1847.83** | **650.00** | **2497.83** |

i) Long Term
   (a) Rs. 200 crores for Capex 2009-10
   (b) Rs. 300 crores for Niranthara Jyothi 1st Phase &

ii) Short Term Loan of Rs. 150 crores for payment of power purchase bills.

iii) Enhancement of LC limits –Rs. 10 crores as required by CGS.

5. HESCOM's request has been examined and matter placed before the Cabinet meeting held on 28-01-2010 Government decided to provide a Government guarantee for a loan amount of Rs. 150 crores to HESCOM, subject to payment of guarantee fee @ 1%" by HESCOM to Government. Hence, this order.

**Government Order No. EN 85 PSR 2009, Bangalore, Dated : 16th February 2010**

In the circumstances explained above, Government accords approval to provide a Government guarantee for a loan of Rs. 150 crores to be obtained by Hubli Electricity Supply Company Limited from the Banks.

HESCOM shall pay a guarantee fee @ 1% per annum to Government towards the above.

This order issued with the concurrence of Finance Department vide U.O. Note No. FD 2093 Exp-1/2009 dated 02.01.2010.

By Order and in the name of the Governor of Karnataka,
**(S.J.SAMPATH KUMAR)**
Under Secretary to Government,
Energy Department

PR. 490

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ, ಬೀದರ್ ತಾಲ್ಲೂಕಿನ ಜಮಿಸ್ತಾನಪೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 23–03–2005ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಭೂಸ್ವಾಪ್ರ/04–05/1492.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಬೀದರ್ ಜಿಲ್ಲೆ ಹಾಗೂ ತಾಲ್ಲೂಕಿನ ಜಮಿಸ್ತಾನಪೂರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮಿಸ್ತಾನಪೂರ ಗ್ರಾಮದ ಸರ್ವೆ ನಂ : 10/2ಗೆ ಸೇರಿದ ಜಮೀನಿಗೆ ಬೀದರ್‌ನ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದ ತೀರ್ಪಿನಲ್ಲಿ ನೀಡಿದ ತೀರ್ಪಿನನುಸಾರ ಹೆಚ್ಚಿನ ಹಣ ಪಾವತಿಸಲು ರೂ. 4,57,366.00ರನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿದ ಜಮೀನಿನ ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 27–12–1990.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ : 27–04–1992.

ಭೂಸ್ವಾಧೀನಕ್ಕೊಳಪಟ್ಟ ಜಮೀಸ್ತಾನಪೂರ ಗ್ರಾಮದ ಸರ್ವೆ ನಂ : 10/2ರ 2 ಎಕರೆ 27 ಗುಂಟೆ ಜಮೀನಿನ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬೀದರ್‌ನ ಹೆಚ್ಚುವರಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಾಗಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಹೆಚ್ಚುವರಿ ಪರಿಹಾರ ಧನ ಪಾವತಿಸಲು ಕಂದಾಯ ಇಲಾಖೆಯು ಸಹಮತಿ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ.ಸಂ | ಎಲ್.ಎ.ಸಿ. ಸಂಖ್ಯೆ | ಜಮಿಸ್ತಾನಪೂರ ಗ್ರಾಮದ ಸರ್ವೆ ನಂ : | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 344/92 | 10/2 | 2–27 | 4,57,366–00 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 160 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2010**

ಬೀದರ್ ಜಿಲ್ಲೆ ಹಾಗೂ ತಾಲ್ಲೂಕಿನ ಜಮಿಸ್ತಾನಪೂರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮಿಸ್ತಾನಪೂರ ಗ್ರಾಮದ ಸರ್ವೆ ನಂ : 10/2ರ 2 ಎಕರೆ 27 ಗುಂಟೆ ಜಮೀನಿಗೆ ಬೀದರ್‌ನ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿನ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರಧನದ ಮೊತ್ತ ರೂ. 4,57,366–00ಗಳನ್ನು (ನಾಲ್ಕು ಲಕ್ಷದ ಐವತ್ತೇಳು ಸಾವಿರದ ಮೂರು ನೂರ ಅರವತ್ತಾರು ರೂ.ಗಳೂ ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 491

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ಹುಲಿಯಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 19–08–2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009–10/4947.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕು ಹುಲಿಯಾಪುರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೋದೂರು ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 09–08–2001.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ : 01–12–2003.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಯಲಬುರ್ಗಾ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ : ಆರ್‌ಡಿ 1109 ಎಲ್‌ಸಿಜಿ 2008, ದಿನಾಂಕ 06–02–09ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ.ಸಂ | ಎಲ್.ಎ.ಸಿ. ಸಂಖ್ಯೆ | ಬೋದೂರು ಗ್ರಾಮದ ಸರ್ವೆ ನಂ : | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 44/06 | 32/ಅ | 0–26 | 1,61,276–00 |
| | | | | 1,61,276–00 |

• ಪರಿಹಾರಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 137 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2010**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಹುಲಿಯಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೋದೂರು ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರಧನದ ಮೊತ್ತ ರೂ. 1,61,276–00ಗಳನ್ನು (ಒಂದು ಲಕ್ಷದ ಅರವತ್ತೊಂದು ಸಾವಿರದ ಇನ್ನೂರ ಎಪ್ಪತ್ತಾರು ರೂ.ಗಳೂ ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 492

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬೆಣಕಲ್ಲು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 07–11–2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಭೂಸ್ವಾಪ್ರ/2009–10/6632.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಬಳ್ಳಾರಿ ಜಿಲ್ಲೆ ಹಾಗೂ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬೆಣಕಲ್ಲು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೆಣಕಲ್ಲು ಗ್ರಾಮದ ಸರ್ವೆ ನಂ : 621/3ಬಿ ಮತ್ತು 626/ಡಿಗೆ ಸೇರಿದ ಜಮೀನಿಗೆ ಹೊಸಪೇಟೆ ಹಿರಿಯ ಶ್ರೇಣಿ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ.ಪ್ರಕರಣದ ತೀರ್ಪಿನಲ್ಲಿ ನೀಡಿದ ತೀರ್ಪಿನುನುಸಾರ ಹೆಚ್ಚಿನ ಹಣ ಪಾವತಿಸಲು

ರೂ. 1,29,757–00 ರನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿದ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 01–09–1994.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ : 31–01–1996.

ಭೂಸ್ವಾಧೀನಕ್ಕೊಳಪಟ್ಟ ಬೆಣಕಲ್ಲು ಗ್ರಾಮದ ಸರ್ವೆ ನಂ.ಗಳಿಗೆ ಸೇರಿದ ಜಮೀನಿನ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೊಸಪೇಟೆಯ ಪ್ರಿನ್ಸಿಪಲ್ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ : ಲಾ 598 ಎಲ್ಎಸ್ಪಿ 2006, ದಿನಾಂಕ 05–05–06ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ.ಸಂ | ಎಲ್.ಎ.ಸಿ. ಸಂಖ್ಯೆ | ಬೆಣಕಲ್ಲು ಗ್ರಾಮದ ಸರ್ವೆ ನಂ : | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 49/96 | 621/ಬಿ | 1–30 | 1,29,757–00 |
| | | 626/ಡಿ | 0–41 | |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 168 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2010**

ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬೆಣಕಲ್ಲು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪ್ರಸ್ತಾವನೆಯಲ್ಲಿ ತಿಳಿಸಿರುವ ಬೆಣಕಲ್ಲು ಗ್ರಾಮದ ಸರ್ವೆ ನಂ.ಗಳಿಗೆ ಸೇರಿದ ಜಮೀನಿಗೆ ಹೊಸಪೇಟೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿನ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರಧನದ ಮೊತ್ತ ರೂ. 1,29,757–00ಗಳನ್ನು (ಒಂದು ಲಕ್ಷದ ಇಪ್ಪತ್ತೊಂಬತ್ತು ಸಾವಿರದ ಏಳು ನೂರ ಐವತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 493

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ವಿಜಾಪುರ ಜಿಲ್ಲೆ, ಸಿಂದಗಿ ತಾಲ್ಲೂಕಿನ ಬೊಮ್ಮನಜೋಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 17-12-2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಭೂಸ್ವಾಪ್ರ/2009-10/7549.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ವಿಜಾಪುರ ಜಿಲ್ಲೆ ಹಾಗೂ ಸಿಂದಗಿ ತಾಲ್ಲೂಕಿನ ಬೊಮ್ಮನಜೋಗಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೊಮ್ಮನಜೋಗಿ ಗ್ರಾಮದ ಸರ್ವೆ ನಂ : 90/2ಎ ಸೇರಿದ ಜಮೀನಿಗೆ ಬಿಜಾಪುರ ಹಿರಿಯ ಶ್ರೇಣಿ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದ ತೀರ್ಪಿನಲ್ಲಿ ನೀಡಿದ ತೀರ್ಪಿನನುಸಾರ ಹೆಚ್ಚಿನ ಹಣ ಪಾವತಿಸಲು ರೂ. 2,96,270-00ನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿದ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 08-02-1996.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ : 02-01-1999.

ಭೂಸ್ವಾಧೀನಕ್ಕೊಳಪಟ್ಟ ಬೊಮ್ಮನಜೋಗಿ ಗ್ರಾಮದ ಸರ್ವೆ ನಂ.ಗೆ ಸೇರಿದ ಜಮೀನಿನ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೊಸಪೇಟೆಯ ಪ್ರಿನ್ಸಿಪಲ್ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ.ಸಂ | ಎಲ್.ಎ.ಸಿ. ಸಂಖ್ಯೆ | ಬೊಮ್ಮನಜೋಗಿ ಗ್ರಾಮದ ಸರ್ವೆ ನಂ : | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 35/01 | 90/2ಎ | 5-15 | 2,96,270-00 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸಿವಿಲ್ ನ್ಯಾಯಾಲಯದ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರಲು ನಿರ್ಧಾರ ಕೈಗೊಂಡು ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 16 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2010**

ಬಿಜಾಪುರ ಜಿಲ್ಲೆ, ಸಿಂದಗಿ ತಾಲ್ಲೂಕಿನ ಬೊಮ್ಮನಜೋಗಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪ್ರಸ್ತಾವನೆಯಲ್ಲಿ ತಿಳಿಸಿರುವ ಬೊಮ್ಮನಜೋಗಿ ಗ್ರಾಮದ ಸರ್ವೆ ನಂ.ಗೆ ಸೇರಿದ ಜಮೀನಿಗೆ ಬಿಜಾಪುರ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿನ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರಧನದ ಮೊತ್ತ ರೂ. 2,96,270-00ಗಳನ್ನು (ಎರಡು ಲಕ್ಷದ ತ್ತೊಂಬತ್ತಾರು ಸಾವಿರದ ಎರಡು ನೂರ ಎಪ್ಪತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009-10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16-05-2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 494

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಆರ್ಥಿಕ ಸಚಿವಾಲಯ

**ವಿಷಯ :** ಆರ್ಥಿಕ ಇಲಾಖೆಯು ಅನುಮತಿ ನೀಡಿದೆ ಎಂದು ಭಾವಿಸಬಹುದಾದ ಸಂದರ್ಭಗಳು– ಚಿಕಿತ್ಸೆಗಾಗಿ ಮುಂಗಡ ಠೇವಣಿ ಪಾವತಿ ಆದೇಶವನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2001, ದಿನಾಂಕ : 2-2-2001.
2. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 4 ಟಿಎಫ್‌ಪಿ (99)2, ದಿನಾಂಕ : 15-10-1999.
3. ಅಧಿಸೂಚನೆ ಸಂಖ್ಯೆ : ಸಿಆಸುಇ 1 ಎಸ್‌ಎಂಆರ್ 2000 ದಿನಾಂಕ : 22-01-2001.
4. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 2 ಟಿಎಫ್‌ಪಿ 2001, ದಿನಾಂಕ : 16-4-2001.
5. ಸರ್ಕಾರಿ ಸೇರ್ಪಡೆ ಆದೇಶ ಸಂಖ್ಯೆ : ಎಫ್‌ಡಿ 02 ಟಿಎಫ್‌ಪಿ 01, ದಿನಾಂಕ : 10-7-2001.
6. ಅಧಿಸೂಚನೆ ಸಂಖ್ಯೆ : ಸಿಆಸುಇ 2 ಎಸ್‌ಎಂಆರ್ 2008 ದಿನಾಂಕ : 24-10-2009.
7. ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 16 ಎಸ್‌ಎಂಆರ್ 2009 ದಿನಾಂಕ : 12-11-2009.

**ಪ್ರಸ್ತಾವನೆ :**

ಮೇಲಿನ ಕ್ರಮಾಂಕ (1) ಮತ್ತು (2)ರಲ್ಲಿ ಉಲ್ಲೇಖಿಸಲಾದ ಸರ್ಕಾರಿ ಆದೇಶಗಳಲ್ಲಿ ಆರ್ಥಿಕ ಇಲಾಖೆಯು ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 45 ರಲ್ಲಿ ಉದ್ದೇಶಿಸಿದಂತೆ ತನ್ನ ಅನುಮತಿಯನ್ನು ನೀಡಲಾಗಿದೆ ಎಂದು ಭಾವಿಸಬಹುದಾದ ಪ್ರಕರಣಗಳನ್ನು ಆದೇಶಗಳ ಅನುಬಂಧದಲ್ಲಿ ನಮೂದಿಸಿದಂತೆ ಗೊತ್ತುಪಡಿಸಿದೆ.

ಮೇಲೆ (4) ಮತ್ತು (5) ರಲ್ಲಿ ಓದಲಾದ ಆದೇಶಗಳಲ್ಲಿ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮ 1963ರಲ್ಲಿ ನಿಗದಿಪಡಿಸಿರುವ ಷರತ್ತುಗಳನ್ನು ಪೂರೈಸುವುದರ ನಿಬಂಧನೆಗಳಿಗೆ ಒಳಪಟ್ಟು ಗ್ರೂಪ್ 'ಸಿ' ಮತ್ತು 'ಡಿ' ದರ್ಜೆಯ ಅಧಿಕಾರಿಗಳು ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 1 ಎಸ್‌ಎಂಆರ್ 2000 ದಿನಾಂಕ : 22-1-2001ರ ಷೆಡ್ಯೂಲ್–1 ರಲ್ಲಿ ಸೂಚಿಸಿರುವ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯಲು ಷೆಡ್ಯೂಲ್ 2 ಮತ್ತು 3 ರಲ್ಲಿ ಸೂಚಿಸಿದ ದರಗಳಂತೆ ಪಡೆಯುವ ಚಿಕಿತ್ಸೆಗಾಗಿ ಮುಂಗಡ ಠೇವಣಿ ಪಾವತಿ ಮಂಜೂರು ಮಾಡಲು ಇಲಾಖಾ ಮುಖ್ಯಸ್ಥರುಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿತ್ತು.

ಮೇಲೆ ಕ್ರಮಾಂಕ (6) ರಲ್ಲಿನ ಅಧಿಸೂಚನೆಯಲ್ಲಿ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963ಕ್ಕೆ ಮಾಡಿರುವ ತಿದ್ದುಪಡಿಗಳಲ್ಲಿ ನಿಯಮ 14ಕ್ಕೆ ಸಂಬಂಧಪಟ್ಟಂತೆ ಅನುಸೂಚಿ–2 ಹಾಗೂ ಅನುಸೂಚಿ–3ನ್ನು ಕೈಬಿಡಲಾಗಿದ್ದು ಸಿ.ಜಿ.ಹೆಚ್.ಎಸ್. ದರಗಳನ್ನು ಅಳವಡಿಸಿಕೊಂಡಿರುವುದರಿಂದ ಮುಂಗಡ ಠೇವಣಿ ಮಂಜೂರಾತಿಯ ಆದೇಶಗಳನ್ನು ಸೂಕ್ತವಾಗಿ ಪರಿಷ್ಕರಿಸುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧೀನ ಕಾರ್ಯದರ್ಶಿರವರು ದಿನಾಂಕ : 12-11-2009ರ ಅನಧಿಕೃತ ಟಿಪ್ಪಣಿಯಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 9 ಟಿಎಫ್‌ಪಿ 2009,(2) ಬೆಂಗಳೂರು, ದಿನಾಂಕ: 21ನೇ ಜನವರಿ 2010**

ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಟಿಎಫ್‌ಪಿ 2001 ದಿನಾಂಕ : 16-4-2001 ಮತ್ತು ದಿನಾಂಕ : 10-7-2001ರ ಸೇರ್ಪಡೆ ಆದೇಶವನ್ನು ಈ ಕೆಳಗಿನಂತೆ ಮಾರ್ಪಡಿಸಲಾಗಿದೆ.

ಕ್ರಮಾಂಕ : (1)ರಲ್ಲಿ ಓದಲಾದ ದಿನಾಂಕ : 2-1-2001ರ ಸರ್ಕಾರಿ ಆದೇಶದ ಅನುಬಂಧದ ಕ್ರಮ ಸಂಖ್ಯೆ 55ರ ನಂತರ ಈ ಕೆಳಕಂಡ ಅಂಶವನ್ನು 55 (1) ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

"ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮ 1963 ರಲ್ಲಿ ನಿಗದಿಪಡಿಸಿರುವ ಷರತ್ತುಗಳನ್ನು ಪೂರೈಸುವುದರ ನಿಬಂಧನೆಗಳಿಗೆ ಒಳಪಟ್ಟು ಗ್ರೂಪ್ 'ಸಿ' ಮತ್ತು 'ಡಿ' ದರ್ಜೆಯ ಅಧಿಕಾರಿಗಳು ಸದರಿ ನಿಯಮಗಳ ಷೆಡ್ಯೂಲ್ 1ರಲ್ಲಿ ಸೂಚಿಸಿರುವ ಆಸ್ಪತ್ರೆಗಳಲ್ಲಿ, ಚಿಕಿತ್ಸೆ ಪಡೆಯಲು ಸರ್ಕಾರಿ ಅಧಿಸೂಚನೆ ಸಂಖ್ಯೆ : ಸಿಆಸುಇ 2 ಎಸ್‌ಎಂಆರ್ 2008 ದಿನಾಂಕ : 24-10-2009ರ ಕಂಡಿಕೆ 5(ii) (3) ರಲ್ಲಿ ವಿವರಿಸಿರುವಂತೆ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯವು ಕೇಂದ್ರ ಸರ್ಕಾರದ ಆರೋಗ್ಯ ಸೇವೆಗಳಡಿಯಲ್ಲಿ (CGHS) ಕಾಲಕಾಲಕ್ಕೆ ವಿವಿಧ ರೋಗ ನಿರ್ಣಯ ವಿಧಾನಗಳಿಗೆ ಮತ್ತು ಚಿಕಿತ್ಸೆಗಳಿಗೆ ನಿಗದಿಪಡಿಸುವ ದರಗಳಂತೆ ಪಡೆಯುವ ಚಿಕಿತ್ಸೆಗಾಗಿ ಮುಂಗಡ ಠೇವಣಿ ಪಾವತಿ ಮಾಡಲು ಮಂಜೂರಾತಿ"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 495

**(ಸಿ. ಶ್ಯಾಮರಾವ್)**

ಸರ್ಕಾರದ ಅಧೀನ ಕಾರ್ಯದರ್ಶಿ,

(ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ)

ಆರ್ಥಿಕ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ, ಬೀದರ್ ತಾಲ್ಲೂಕು, ಜಮಿಸ್ತಾನಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 03-08-2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009-10/4574.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಬೀದರ್ ಜಿಲ್ಲೆ, ಬೀದರ್ ತಾಲ್ಲೂಕು, ಜಮಿಸ್ತಾನಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 26-06-1997.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 31-03-2001.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬೀದರ್ ಸಿವಿಲ್ ನ್ಯಾಯಾಲಯದಲ್ಲಿ (ಹಿರಿಯ ಶ್ರೇಣಿ) ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಪ್ರಕರಣದ ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್‌ಎಸಿ ಪ್ರಕರಣ ಸಂ. | ಜಮಿಸ್ತಾನಪುರ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 21/01 | 10/1 | 5-21 | 11,55,379-00 |
| 2 | 23/01 | 10/3 | 0-17 | 92,869-00 |
| 3 | 61/01 | 9/2 | 0-19 | 99,328-00 |
| | | | ಒಟ್ಟು | 13,47,576-00 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಅಭಿಪ್ರಾಯ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 86 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2010.**

ಬೀದರ್ ಜಿಲ್ಲೆ, ಬೀದರ್ ತಾಲ್ಲೂಕು, ಜಮಿಸ್ತಾನಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮಿಸ್ತಾನಪುರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರಧನ ಮೊತ್ತ ರೂ. 13,47,576–00 ಗಳನ್ನು (ಹದಿಮೂರು ಲಕ್ಷದ ನಲವತ್ತೇಳು ಸಾವಿರದ ಐದು ನೂರ ಎಪ್ಪತ್ತಾರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 536

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಹಸರಗುಂಡಗಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 25–09–2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009–10/5709.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಗಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಹಸರಗುಂಡಗಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.61,424–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ಐತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 10–12–1981.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 22–05–1984.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸೇಡಂ ಸಿವಿಲ್ ನ್ಯಾಯಾಲಯದಲ್ಲಿ

(ಹಿರಿಯ ಶ್ರೇಣಿ) ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ಐತೀರ್ಪು ನೀಡಿದೆ. ಪ್ರಕರಣದ ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್ಎಸಿ ಪ್ರಕರಣ ಸಂ. | ಹಸರಗುಂಡಗಿ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 168/03 | 14/1 | 1-10 | 61,420-00 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯ ಪತ್ರ ಸಂಖ್ಯೆ : ಲಾ 2718 ಎಲ್ಎಸ್‌ಪಿ 2005 ದಿನಾಂಕ : 20-01-2006ರಲ್ಲಿ ಅಭಿಪ್ರಾಯ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 148 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2010.**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಹಸರ್‌ಗುಂಡಗಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹಸರ್‌ಗುಂಡಗಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ನ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಧನ ಮೊತ್ತ ರೂ. 61,420-00 ಗಳನ್ನು (ಅರವತ್ತೊಂದು ಸಾವಿರದ ನಾಲ್ಕು ನೂರ ಇಪ್ಪತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009-10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16-05-2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 537

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹುಲಿಯಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಶಿಡ್ಲಬಾವಿ ಗ್ರಾಮದಲ್ಲಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 19-08-2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009-10/4948.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹುಲಿಯಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಶಿಡ್ಲಬಾವಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.5,59,137-00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 23–08–2001.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 11–02–2005.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳ ಸಿವಿಲ್ ನ್ಯಾಯಾಲಯದಲ್ಲಿ (ಹಿರಿಯ ಶ್ರೇಣಿ) ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಪ್ರಕರಣದ ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್ಎಸಿ ಪ್ರಕರಣ ಸಂ. | ಶಿಡ್ಲಬಾವಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 45/06 | 26/ಕೆ | 2–00 | 5,59,137–00 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 1109 ಎಲ್‌ಸಿಜೆ 2008 ದಿನಾಂಕ : 06–02–2009ರಲ್ಲಿ ಅಭಿಪ್ರಾಯ ನೀಡಿದೆ. ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 136 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2010.**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹುಲಿಯಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಶಿಡ್ಲಬಾವಿ ಗ್ರಾಮದ ಮೇಲ್ಕಂಡ ಸರ್ವೆ ನಂಬರ್‌ನ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 5,59,137–00 ಗಳನ್ನು (ಐದು ಲಕ್ಷದ ಐವತ್ತೊಂಬತ್ತು ಸಾವಿರದ ಒಂದು ನೂರ ಮೂವತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 538

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬೆಣಕಲ್ಲು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 07–11–2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಭೂಸ್ವಾಪ್ರ/2009–10/6636.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬೆಣಕಲ್ಲು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೆಣಕಲ್ಲು ಗ್ರಾಮದ ಸರ್ವೆ ನಂ : 651/ಎ1 ಮತ್ತು 651/ಬಿ1 ಸೇರಿದ ಜಮೀನಿಗೆ ಹೊಸಪೇಟೆ ಹಿರಿಯ ಶ್ರೇಣಿ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದ ತೀರ್ಪಿನಲ್ಲಿ ನೀಡಿದ ಐತೀರ್ಪಿನನುಸಾರ ಹೆಚ್ಚಿನ ಹಣ ಪಾವತಿಸಲು ರೂ.4,05,822–00ನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಮ ನೀಡಿದ ಜಮೀನಿನ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 05–12–1996.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 06–11–1998.

ಭೂಸ್ವಾಧೀನಕ್ಕೊಳಪಟ್ಟ ಬೆಣಕಲ್ಲು ಗ್ರಾಮದ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನಿನ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೊಸಪೇಟೆಯ ಪ್ರಿನ್ಸಿಪಲ್ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ಐತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ : ಲಾ 723 ಎಲ್‌ಎಸ್‌ಪಿ 2007 ದಿನಾಂಕ : 01–06–2007ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ.ಸಂ. | ಎಲ್‌ಎಸಿ ಪ್ರಕರಣ ಸಂ. | ಬೆಣಕಲ್ಲು ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 12/2000 | 651/ಎ1<br>651/ಬಿ1 | 4–17<br>1–52 | 4,05,822–00 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 165 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2010.**

ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬೆಣಕಲ್ಲು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪ್ರಸ್ತಾವನೆಯಲ್ಲಿ ತಿಳಿಸಿರುವ ಬೆಣಕಲ್ಲು ಗ್ರಾಮದ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನಿಗೆ ಹೊಸಪೇಟೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿನ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನದ ಮೊತ್ತ ರೂ. 4,05,822–00 ಗಳನ್ನು (ನಾಲ್ಕು ಲಕ್ಷದ ಐದು ಸಾವಿರದ ಎಂಟು ನೂರಾ ಇಪ್ಪತ್ತೆರಡು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009-10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16-05-2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 539

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು, ನವೀನಿಹಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 28-10-2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009-10/6378.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು, ನವೀನಿಹಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.59,579-00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರಧನಕ್ಕೆ ಐತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 30-09-1993.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 12-03-1996.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗುಲ್ಬರ್ಗಾ ಸಿವಿಲ್ ನ್ಯಾಯಾಲಯದಲ್ಲಿ (ಹಿರಿಯ ಶ್ರೇಣಿ) ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಪ್ರಕರಣದ ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್‌ಎಸಿ ಪ್ರಕರಣ ಸಂ. | ನವನೀಹಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 447/99 | 119/3 | 0-15 | 59,579-00 |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಸಿವಿಲ್ ನ್ಯಾಯಾಲಯದ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರುವ ನಿರ್ಧಾರ ಕೈಗೊಂಡು ಪ್ರಕರಣಕ್ಕೆ ಮುಖ್ಯ ಅಭಿಯಂತರರ ಪ್ರಸ್ತಾವನೆಯಂತೆ ಹಣ ಪಾವತಿಸಲು ತೀರ್ಮಾನಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 160 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2010.**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು, ನವೀನಿಹಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನವೀನಹಾಳ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ನ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಧನ ಮೊತ್ತ ರೂ. 59,579–00 ಗಳನ್ನು (ಐವತ್ತೊಂಬತ್ತು ಸಾವಿರದ ಐದು ನೂರಾ ಎಪ್ಪತ್ತೊಂಬತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 540

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## WATER RESOURCES SECRETARIAT

**Sub :** Constitution of State Level Committee for re-estimation of Ground Water Resources-Estimation of Annual Replenishable Ground Water Resources-reg.

**Read :** Letter No. T-25/CGWB/SWR-2009-181 dated 8-2-2010 of the Regional Director, Central Ground Water Board, Bangalore.

**Preamble:**

The Regional Director, Central Ground Water Board, Bangalore in his letter read above has informed that the last assessment of State-wise Annual Replenishable Ground Water Resources for the entire country was made in the year 2004 based on the Methodology adopted by the Ground Water Resources Estimation Committee-1997. Since then, changes in ground water scenario in many parts of the State is observed. The National Water Policy, 2002 has also recommended that the ground water resources of the country should be re-assessed periodically. With a view to re-estimate Ground Water Resources as in 2008-09 to estimate annual replenishable Ground Water Resources of Karnataka State he has requested to constitute the State Level Committee in accordance with the Ground Water Resources Estimation Methodology.

Hence the following Order.

**Government Order No. MID 05 AaJaAa 2010, Bangalore, Dated The 22nd February 2010**

In view of the above, Govenrment is pleased to constitute the State Level Committee for re-estimation of Ground Water Resources with the composition of following members with immediate effect and until further Orders :

| | | |
|---|---|---|
| 1. | Secretary to Govenrment, Water Resources Department (Minor Irrigation) | Chairman |
| 2. | Chief Engineer, Minor Irrigation, South Zone, Bangalore | Member |
| 3. | Chief Engineer, Minor Irrigation, North Zone, Bijapur | Member |
| 4. | Director, Mines & Geology Department (Ground Water) | Member |
| 5. | Chief Engineer, Karnataka Urban Water Supply and Drainage Board | Member |
| 6. | Director, Department of Agriculture | Member |
| 7. | Chief Engineer, Water Resources Development Organisation | Member |
| 8. | Chief Engineer, Rural Development Engineering Department | Member |
| 9. | Commissioner/Director for department of Industries | Member |
| 10. | General Manager, NABARD | Member |
| 11. | Regional Director, Central Ground Water Board, Government of India, Bangalore | Member Secretary |

Committee may co-operate any other member/special invitee if necessary.

2. **Terms of Reference :** The broad terms of reference of the Committee would be as follows :

(i) To estimate annual replenishable Ground Water Resources of Karnataka State in accordance with the Ground Water Resource Estimation Methodology ;

(ii) To estimate the status of utilization of annual replenishable gound water resource.

3. **Time Frame :** The Committee shall submit its report at the earliest from the date of its constitution.

4. **Expenditure :** Expenditure on account of TA/DA to official Members of the Committee will be met from the source from which they draw their salaries.

By Order and in the name of the Governor of Karnataka,

PR. 546

(K. Sudhakara Shetty)
Under Secretary to Government,
Water Resources Department. (Minor Irrigation)

## ಶಿಕ್ಷಣ ಸಚಿವಾಲಯ

**ವಿಷಯ :** ಜಮಖಂಡಿ ತಾಲ್ಲೂಕಿನ ಹುನ್ನೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಿಸಲು, ಆ ಗ್ರಾಮದ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಸೇರಿದ ಜಮೀನಿನಲ್ಲಿ 1.05 ಎಕರೆ ಜಮೀನನ್ನು ಹಸ್ತಾಂತರ ಮಾಡುವ ಬಗ್ಗೆ

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ರವರ ಪತ್ರ ಸಂಖ್ಯೆ : ಯೋ 7 ಸಪ್ರದ ಕಾ. ನಿವೇಶನ 34/2007–08, ದಿನಾಂಕ 14–9–2009.

**ಪ್ರಸ್ತಾವನೆ :**

1) ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹುನ್ನೂರು, ಜಮಖಂಡಿ ತಾಲ್ಲೂಕು ಇಲ್ಲಿ ಕಟ್ಟಡ ನಿರ್ಮಿಸಲು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹುನ್ನೂರು ಈ ಕಾಲೇಜಿಗೆ ಸೇರಿದ ಸರ್ವೆ ಸಂಖ್ಯೆ 1017/ಎ/1 ರಲ್ಲಿನ 6.20 ಎಕರೆ ಜಮೀನಿನಲ್ಲಿ 3.05 ಎಕರೆ ಜಮೀನನ್ನು ಹಸ್ತಾಂತರ ಮಾಡಬಹುದೆಂದು

ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರು ಶಿಫಾರಸ್ಸು ಮಾಡಿದ್ದು, ಅದರಂತೆ ಜಮೀನು ಹಸ್ತಾಂತರದ ಬಗ್ಗೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 273 ಯೋಸಕ 2009, ಬೆಂಗಳೂರು, ದಿನಾಂಕ: 10-2-2010.**
**(ಇಡಿ 16 ಸ್ವೀಮರ (ಯುನಿಕ್) 2010, ದಿನಾಂಕ : 10-2-2010**

ಜಮಖಂಡಿ ತಾಲ್ಲೂಕಿನ ಹುನ್ನೂರು ಗ್ರಾಮದ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಸೇರಿದ ಸರ್ವೆ ಸಂಖ್ಯೆ : 1017/ಎ/1 ರಲ್ಲಿನ 6.20 ಎಕರೆ ಜಮೀನಿನಲ್ಲಿ ಒಂದು ಎಕರೆ ಜಮೀನನ್ನು ಹುನ್ನೂರು ಗ್ರಾಮದಲ್ಲಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣ ಮಾಡಲು, ಕಾಲೇಜು ಶಿಕ್ಷಣ ಇಲಾಖೆಗೆ ನಿಯಮಾನುಸಾರ ಹಸ್ತಾಂತರಿಸಲು, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ಅನುಮತಿ ನೀಡಿದೆ.

ಪಿ.ಆರ್. 547

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಐ.ಎಫ್. ಮಾಗಿ)**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 205 ಸಅಸೇ 2009, ದಿನಾಂಕ : 20-4-2009
**2.** ಸರ್ಕಾರದ ಕಾರ್ಯದರ್ಶಿ, ವಸತಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ : ವಇ/597/ಕಾರ್ಯದರ್ಶಿ/2010, ದಿನಾಂಕ: 30-1-2010

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ : 1-4-2009 ರಿಂದ 31-3-2010 ರವರೆಗೆ ಮುಂದುವರಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ ವಸತಿ ಇಲಾಖೆ ಹಾಗೂ ಪೂರಕ ಹುದ್ದೆಗಳನ್ನು 2010-2011 ನೇ ವರ್ಷದ ಸಾಲಿಗೆ ಮುಂದುವರಿಸುವಂತೆ ಕೋರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್-2) | 01 ಹುದ್ದೆ |
| 2. | ಶೀಘ್ರಲಿಪಿಗಾರರು/ ಹಿರಿಯ ಶೀಘ್ರಲಿಪಿಗಾರರು/ ಪತ್ರಾಂಕಿತ ಆಪ್ತ ಸಹಾಯಕರು | 02 ಹುದ್ದೆಗಳು |
| 3. | ಕಿರಿಯ ಸಹಾಯಕರು/ಸಹಾಯಕ | 01 ಹುದ್ದೆ |
| 4. | ವಾಹನ ಚಾಲಕರು | 01 ಹುದ್ದೆ |
| 5. | ದಲಾಯತ್ | 02 ಹುದ್ದೆಗಳು |
| | ಒಟ್ಟು | 07 ಹುದ್ದೆಗಳು |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 50 ಸಅಸೇ 2010, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ, 2010.**

ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಸರ್ಕಾರದ ಕಾರ್ಯದರ್ಶಿ ಹಾಗೂ ಈ ಕೆಳಕಂಡ ಪೂರಕ ಹುದ್ದೆಗಳನ್ನು ದಿನಾಂಕ : 1–4–2010 ರಿಂದ 31–3–2011 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2) | 01 ಹುದ್ದೆ |
| 2. | ಶೀಘ್ರಲಿಪಿಗಾರರು/ ಹಿರಿಯ ಶೀಘ್ರಲಿಪಿಗಾರರು/ ಪತ್ರಾಂಕಿತ ಆಪ್ತ ಸಹಾಯಕರು | 02 ಹುದ್ದೆಗಳು |
| 3. | ಕಿರಿಯ ಸಹಾಯಕರು/ಸಹಾಯಕ | 01 ಹುದ್ದೆ |
| 4. | ವಾಹನ ಚಾಲಕರು | 01 ಹುದ್ದೆ |
| 5. | ದಲಾಯತ್ | 02 ಹುದ್ದೆಗಳು |
| | ಒಟ್ಟು | 07 ಹುದ್ದೆಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 548

**(ಎಂ.ಎಸ್. ಶಿವರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಗಾಗಿ ಕಾರ್ಯಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸಲು ಉನ್ನತ ಮಟ್ಟದ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸಂಖ್ಯೆ : ಪಿಎಸ್‌ಸಿಎಂ/3457/2009, ದಿನಾಂಕ : 25–9–2009 ರಂದು ಮಾನ್ಯ ಮುಖ್ಯ ಮಂತ್ರಿಗಳು, ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೆ ಬರೆದ ಟಿಪ್ಪಣಿ.

**ಪ್ರಸ್ತಾವನೆ :**

2009 ಸೆಪ್ಟಂಬರ್ 9 ರಿಂದ 16 ರವರೆಗೆ ನಡೆದ ವಿಧಾನ ಮಂಡಲದ ಅಧಿವೇಶನದಲ್ಲಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಕುರಿತಂತೆ ಸುದೀರ್ಘವಾಗಿ ಚರ್ಚಿಸಿದ ಸಂದರ್ಭದಲ್ಲಿ, ಮಾನ್ಯ ಮುಖ್ಯ ಮಂತ್ರಿಗಳು "ಭವಿಷ್ಯದತ್ತ ಹೆಜ್ಜೆಗಳು" ಎಂಬ ಶೀರ್ಷಿಕೆಯಡಿಯಲ್ಲಿ ಅನೇಕ ಹೊಸ ಯೋಜನೆಗಳನ್ನು ಪ್ರಸ್ತಾಪಿಸಿದ್ದಾರೆ. ಸದರಿ ಯೋಜನೆಗಳನ್ನು ಪರಿಶೀಲಿಸಿ, ರೂಪಿಸಿ, ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಉನ್ನತ ಮಟ್ಟದ ಸಮಿತಿಯನ್ನು ರಚಿಸುವುದಾಗಿ ಘೋಷಿಸಿದ್ದರು. ಮೇಲೆ ಓದಲಾದ ದಿನಾಂಕ : 25–9–2009ರ ಟಿಪ್ಪಣಿಯಲ್ಲಿ ಸದರಿ ಉನ್ನತ ಸಮಿತಿಯನ್ನು ರಚಿಸಲು ಆದೇಶಿಸಿದ್ದಾರೆ. ಅದರಂತೆ, ಈ ಕೆಳಕಾಣಿಸಿದಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಆಕಾಅ 2009, ಬೆಂಗಳೂರು, ದಿನಾಂಕ: 22–02–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಗಾಗಿ ಕಾರ್ಯಯೋಜನೆಗಳನ್ನು ರೂಪಿಸಿ, ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು, ಕರ್ನಾಟಕದ ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಕೆಳಕಾಣಿಸಿದ ಸದಸ್ಯರನ್ನೊಳಗೊಂಡ ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1 | ಮಾನ್ಯ ಮುಖ್ಯ ಮಂತ್ರಿಗಳು | ಅಧ್ಯಕ್ಷರು |
| 2 | ಮಾನ್ಯ ಕೃಷಿ ಸಚಿವರು | ಸದಸ್ಯರು |
| 3 | ಮಾನ್ಯ ಕಂದಾಯ ಸಚಿವರು | ಸದಸ್ಯರು |

| | | |
|---|---|---|
| 4 | ಮಾನ್ಯ ಪಶುಸಂಗೋಪನಾ ಸಚಿವರು | ಸದಸ್ಯರು |
| 5 | ಮಾನ್ಯ ತೋಟಗಾರಿಕಾ ಸಚಿವರು | ಸದಸ್ಯರು |
| 6 | ಮಾನ್ಯ ಕೃಷಿ ಮಾರುಕಟ್ಟೆ ಸಚಿವರು | ಸದಸ್ಯರು |
| 7 | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು | ಸದಸ್ಯರು |
| 8 | ಮಾನ್ಯ ಜಲಸಂಪನ್ಮೂಲ ಸಚಿವರು | ಸದಸ್ಯರು |
| 9 | ಮಾನ್ಯ ಸಣ್ಣ ನೀರಾವರಿ ಸಚಿವರು | ಸದಸ್ಯರು |
| 10 | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು | ಸದಸ್ಯರು |
| 11 | ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು | ಸದಸ್ಯರು |
| 12 | ಮಾನ್ಯ ಉನ್ನತ ಶಿಕ್ಷಣ ಸಚಿವರು | ಸದಸ್ಯರು |
| 13 | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು | ಸದಸ್ಯರು |
| 14 | ಸರ್ಕಾರದ ಮುಖ್ಯ ಕಾರ್ಯದರ್ಶಿಯವರು | ಸದಸ್ಯರು |
| 15 | ಸರ್ಕಾರದ ಅಭಿವೃದ್ಧಿ ಆಯುಕ್ತರು | ಸದಸ್ಯ ಸಮಾವೇಶಕರು (ಮೆಂಬರ್–ಕನ್ವೀನರ್) |
| 16 | ಮಾನ್ಯ ಅಧ್ಯಕ್ಷರು ಕೃಷಿ ಮಿಷನ್ | ಸದಸ್ಯರು |
| 17 | ಮಾನ್ಯ ಅಧ್ಯಕ್ಷರು ಸಾವಯವ ಕೃಷಿ ಮಿಷನ್ | ಸದಸ್ಯರು |
| 18 | ಮಾನ್ಯ ಅಧ್ಯಕ್ಷರು ಜೈವಿಕ ಇಂಧನ ಕಾರ್ಯಪಡೆ (ಬಯೊಫ್ಯುಲ್) | ಸದಸ್ಯರು |
| 19 | ಮಾನ್ಯ ಶ್ರೀ ಸುಬ್ಬರಾವ್, ಹಿರಿಯ ಪತ್ರಕರ್ತರು | ಸದಸ್ಯರು |
| 20 | ಪ್ರೊ. ರಾಜು, ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರು | ಸದಸ್ಯರು |
| 21 | ಮುಖ್ಯ ಕಾರ್ಯನಿರ್ವಹಣಾಧಿಕಾರಿ ( Rudseti ) | ಸದಸ್ಯರು |
| 22 | ಮಾನ್ಯ ಮುಖ್ಯ ಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು | ಸದಸ್ಯರು |
| 23 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕೃಷಿ ಇಲಾಖೆ | ಸದಸ್ಯರು |
| 24 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ | ಸದಸ್ಯರು |
| 25 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ | ಸದಸ್ಯರು |
| 26 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ತೋಟಗಾರಿಕೆ ಇಲಾಖೆ | ಸದಸ್ಯರು |
| 27 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಸಹಕಾರ ಇಲಾಖೆ | ಸದಸ್ಯರು |
| 28 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ | ಸದಸ್ಯರು |
| 29 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಜಲಸಂಪನ್ಮೂಲ ಇಲಾಖೆ | ಸದಸ್ಯರು |
| 30 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಸಣ್ಣ ನೀರಾವರಿ ಇಲಾಖೆ | ಸದಸ್ಯರು |
| 31 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಸದಸ್ಯರು |

| | | |
|---|---|---|
| 32 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 33 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಉನ್ನತ ಶಿಕ್ಷಣ ಇಲಾಖೆ | ಸದಸ್ಯರು |
| 34 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 549

**(ಕೆ.ಜಿ. ಶಶಿಕಲಾ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಆ.ಸು-ಕಾರ್ಯಾಧ್ಯಯನ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ವೈದೇಹಿ ಇನ್ಸಿಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರೀಸರ್ಚ್ ಸೆಂಟರ್, ಬೆಂಗಳೂರು ಇದಕ್ಕೆ 2009-10ನೇ ಸಾಲಿನಿಂದ ಎಂ.ಎಸ್ಸಿ., ನರ್ಸಿಂಗ್ ಕೋರ್ಸಿಗೆ ಸಂಯೋಜನೆ ನೀಡುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ACA/FR/Vyms/M.Sc RP/2009-10, ದಿನಾಂಕ : 20-6-2009.

**ಪ್ರಸ್ತಾವನೆ :**

ರಾಜೀವ್ ಗಾಂಧಿ, ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯವು ಮೇಲೆ ಓದಲಾದ ತಮ್ಮ ಪತ್ರದಲ್ಲಿ ವೈದೇಹಿ ಇನ್ಸಿಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರಿಸರ್ಚ್ ಸೆಂಟರ್, ಬೆಂಗಳೂರು ಇದು 2009-10ನೇ ಸಾಲಿನಿಂದ ಎಂ.ಎಸ್ಸಿ., ನರ್ಸಿಂಗ್ ಇನ್ ರೇಡಿಯೇಷನ್ ಫಿಜಿಕ್ಸ್ ಕೋರ್ಸನ್ನು 05 ಸೀಟುಗಳ ವಾರ್ಷಿಕ ಪ್ರವೇಶ ಮಿತಿಯೊಂದಿಗೆ ಹೊಸದಾಗಿ ಪ್ರಾರಂಭಿಸಲು ಸಂಯೋಜನೆಗಾಗಿ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿನಿಯಮ, 1994 ರ ಕಲಂ 45(2) ರಡಿ ಸಲ್ಲಿಸಿದ್ದ ಅರ್ಜಿಯನ್ನು, ಸ್ಥಳೀಯ ತಪಾಸಣ ಸಮಿತಿಯ ವರದಿ, ಅಕಾಡೆಮಿಕ್ ಕೌನ್ಸಿಲ್ ಮತ್ತು ಸಿಂಡಿಕೇಟ್ ನಿರ್ಣಯವನ್ನು ಸಲ್ಲಿಸುತ್ತಾ, ಸಂಯೋಜನೆ ನೀಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ವೈದೇಹಿ ಇನ್ಸಿಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರಿಸರ್ಚ್ ಸೆಂಟರ್, ಬೆಂಗಳೂರು ಇದು 2009-10ನೇ ಸಾಲಿನಿಂದ ಎಂ.ಎಸ್ಸಿ., ನರ್ಸಿಂಗ್ ಇನ್ ರೇಡಿಯೇಷನ್ ಫಿಜಿಕ್ಸ್ ಕೋರ್ಸನ್ನು 05 ಸೀಟುಗಳ ವಾರ್ಷಿಕ ಪ್ರವೇಶ ಮಿತಿಯೊಂದಿಗೆ ಹೊಸದಾಗಿ ಪ್ರಾರಂಭಿಸಲು ಸಂಯೋಜನೆಯನ್ನು ನೀಡಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 143 ಎಂಪಿಎಸ್ 2009, ಬೆಂಗಳೂರು, ದಿನಾಂಕ: 20-02-2010.**

ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿನಿಯಮ, 1994 ರ ಕಲಂ 45(2) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವೈದೇಹಿ ಇನ್ಸಿಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರಿಸರ್ಚ್ ಸೆಂಟರ್, ಬೆಂಗಳೂರು ಇದು 2009-10ನೇ ಸಾಲಿನಿಂದ ಎಂ.ಎಸ್ಸಿ., ನರ್ಸಿಂಗ್ ಇನ್ ರೇಡಿಯೇಷನ್ ಫಿಜಿಕ್ಸ್ ಕೋರ್ಸನ್ನು 05 (ಐದು) ಸೀಟುಗಳ ವಾರ್ಷಿಕ ಪ್ರವೇಶ ಮಿತಿಯೊಂದಿಗೆ ಹೊಸದಾಗಿ ಪ್ರಾರಂಭಿಸಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸಂಯೋಜನೆ ನೀಡಲು ಸರ್ಕಾರವು ಶಿಫಾರಸ್ಸು ಮಾಡಿದೆ.

**ಷರತ್ತು ಮತ್ತು ನಿಬಂಧನೆಗಳು**

1. ವೈದೇಹಿ ಇನ್ಸಿಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಮತ್ತು ರಿಸರ್ಚ್ ಸೆಂಟರ್, ಬೆಂಗಳೂರು ಇದು ಶೇ 25 ರಷ್ಟು ಸೀಟುಗಳನ್ನು ಸರ್ಕಾರಕ್ಕೆ ಹಂಚಿಕೆಗಾಗಿ ಬಿಟ್ಟುಕೊಡತಕ್ಕದ್ದು.
2. ಮೇಲ್ಕಂಡ ನರ್ಸಿಂಗ್ ಕೋರ್ಸ್‌ಗಳ ಸಂಯೋಜನೆಗೆ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಮಂಜೂರಾತಿಯನ್ನು ಪಡೆಯತಕ್ಕದ್ದು.
3. ಸಂಸ್ಥೆಯು ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ ನಿಗದಿಪಡಿಸಿರುವ ಮೂಲಭೂತ ಸೌಲಭ್ಯವನ್ನು ಹೊಂದಿರತಕ್ಕದ್ದು.

4. ಸರ್ಕಾರವು ನಿಗಧಿಪಡಿಸಿರುವುಕ್ಕಿಂತ ಯಾವುದೇ ಕಾರಣಕ್ಕೂ ಹೆಚ್ಚುವರಿ ವಿದ್ಯಾರ್ಥಿಗಳ ಪ್ರವೇಶ ಪಡೆಯತಕ್ಕದಲ್ಲ. ಇದನ್ನು ಉಲ್ಲಂಘಿಸಿದಲ್ಲಿ 1991ರ ಕರ್ನಾಟಕ ಮಾನ್ಯತೆ ರಹಿತ ಮತ್ತು ಸಂಯೋಜಿತ ಶಿಕ್ಷಣ ಸಂಸ್ಥೆಗಳಿಗೆ ವಿದ್ಯಾರ್ಥಿಗಳ ಪ್ರವೇಶ ನಿಷೇಧ, ಅಧಿನಿಯಮದಡಿ ಕ್ರಿಮಿನಲ್ ಮೊಕದ್ದಮೆ ಹೂಡಲಾಗುವುದು.
5. ರಾಜ್ಯ ಸರ್ಕಾರವು ಕಾಲಕಾಲಕ್ಕೆ ನೀಡುವ ಸೂಚನೆ ಹಾಗು ಆದೇಶಗಳನ್ನು ಪಾಲಿಸತಕ್ಕದ್ದು.
6. ಸಂಸ್ಥೆಯು ಸ್ವಂತ ಆಸ್ಪತ್ರೆಯನ್ನು 5 ವರ್ಷಗಳ ಕಾಲಮಿತಿಯಲ್ಲಿ ಹೊಂದತಕ್ಕದ್ದು. ತಪ್ಪಿದಲ್ಲಿ ಕಾಲೇಜಿನ ಸಂಯೋಜನೆಯನ್ನು ಹಿಂತೆಗೆದುಕೊಳ್ಳಲಾಗುವುದು.
7. ವಿದ್ಯಾರ್ಥಿಗಳ ಪ್ರವೇಶವನ್ನು ಸರ್ಕಾರವು ಕಾಲ ಕಾಲಕ್ಕೆ ಎಂ.ಎಸ್ಸಿ., ನರ್ಸಿಂಗ್, ಎಂ.ಪಿ.ಟಿ, ಎಂ. ಫಾರ್ಮಾ ಮತ್ತು ಎಂ.ಎಸ್ಸಿ., ರೇಡಿಯೇಷನ್ ಫಿಜಿಕ್ಸ್ ಕೋರ್ಸ್‌ಗಳ ಪ್ರವೇಶಕ್ಕೆ ಸರ್ಕಾರಿ ಕೋಟಾದ ಮತ್ತು ಮ್ಯಾನೇಜ್‌ಮೆಂಟ್ ಕೋಟಾದ ನಿರ್ದಿಷ್ಟ ಅನುಪಾತದಲ್ಲಿ ಪ್ರತಿಬಂಧಿಸುವ ಪ್ರಕಾರವೇ ಮಾಡತಕ್ಕದ್ದು.
8. ಮೇಲ್ಕಂಡ ಸಂಸ್ಥೆಗೆ ಕರ್ನಾಟಕ ಸರ್ಕಾರದ ವತಿಯಿಂದ ಯಾವುದೇ ರೀತಿಯ ಅನುದಾನ, ಆರ್ಥಿಕ ಸೌಲಭ್ಯಗಳನ್ನು ನೀಡಲಾಗುವುದಿಲ್ಲ. ಇದು ಶಾಶ್ವತ ಅನುದಾನ ರಹಿತ ಕಾಲೇಜಾಗಿರುವ ಷರತ್ತಿಗೆ ಒಳಪಟ್ಟಿರುತ್ತದೆ.
9. ಮೇಲ್ಕಂಡ ಯಾವುದೇ ಷರತ್ತನ್ನು ಕಾಲೇಜು ಉಲ್ಲಂಘಿಸಿದಲ್ಲಿ 1994ರ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿನಿಯಮದ 48ನೇ ಪ್ರಕರಣದಲ್ಲಿ ಸಂಯೋಜನೆಯನ್ನು ಹಿಂತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**(ವಿ. ಶ್ರೀರಾಮರೆಡ್ಡಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

ಪಿ.ಆರ್. 550

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ – 2009–10ನೇ ಸಾಲಿಗೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 114 ಎಸ್‌ಜಿಎಫ್ ದಿನಾಂಕ 01–07–2009
2. ಸರ್ಕಾರದ ಆದೇಶ ಸಂಖ್ಯೆ: ಸಿಐ 114 ಎಸ್‌ಜಿಎಫ್ ದಿನಾಂಕ 15–12–2009
3. ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರ ಪತ್ರ ಸಂಖ್ಯೆ–ಕಸಸಂ/ಅ.ಬಿ./2009–10/463 ದಿನಾಂಕ 02–01–2010
4. ಆಯುಕ್ತರು ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರವರ ಪತ್ರ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿ/2009–10, ದಿನಾಂಕ 19–01–2010

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ 2009–10ನೇ ಸಾಲಿನ ಅನುದಾನದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂರವರಿಗೆ ಸಂಸ್ಥೆಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಒದಗಿಸಲಾಗಿರುವ 170.00 ಲಕ್ಷ ರೂ.ಗಳಲ್ಲಿ ಮೊದಲ ತ್ರೈಮಾಸಿಕಕ್ಕೆ ರೂ. 42.50 ಲಕ್ಷಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (2)ರಲ್ಲಿರುವ ಸರ್ಕಾರದ ಆದೇಶದಲ್ಲಿ 2009–10ನೇ ಸಾಲಿನ ಅನುದಾನದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂರವರಿಗೆ ಸಂಸ್ಥೆಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಒದಗಿಸಲಾಗಿರುವ 170.00 ಲಕ್ಷ ರೂ.ಗಳಲ್ಲಿ ರೂ. 10.00 ಲಕ್ಷ ರೂ.ಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (3)ರಲ್ಲಿರುವ ದಿನಾಂಕ 02–01–2010ರ ಪತ್ರದಲ್ಲಿ ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂರವರು ಸಕ್ಕರೆ ಸಂಸ್ಥೆಯ ಆಡಳಿತ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ, ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ವಹಿಸಿಕೊಡುವ ಪ್ರಕ್ರಿಯೆಯು ಪ್ರಗತಿಯಲ್ಲಿರುವುದರಿಂದ ಹಾಗೂ ಎಂ.ಪಿ.ಕ್ ಪ್ರಕಾರ ಕೈಗೊಳ್ಳಬೇಕಾದ ಕಾರ್ಯಚಟುವಟಿಕೆಗಳನ್ನು ಅನುಷ್ಠಾನಗೊಳಿಸಲು ಸಂಸ್ಥೆಗೆ ಮಂಜೂರಾದ ಅನುದಾನ ರೂ. 170.00 ಲಕ್ಷಗಳ ಪೈಕಿ ಬಾಕಿ ಉಳಿದ ಹಣ ರೂ. 117.50 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಮೇಲೆ ಓದಲಾದ (4)ರಲ್ಲಿರುವ ದಿನಾಂಕ 19–01–2010ರ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ರವರು 2009–10ನೇ ಸಾಲಿನ ಅನುದಾನದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂರವರಿಗೆ ಸಂಸ್ಥೆಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಒದಗಿಸಲಾಗಿರುವ 170.00 ಲಕ್ಷ ರೂ.ಗಳಲ್ಲಿ ಬಾಕಿ ಉಳಿದಿರುವ 117.50 ಲಕ್ಷ ರೂ.ಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ. ಮತ್ತು ಮೇಲೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶದಲ್ಲಿ ಈಗಾಗಲೇ ಬಿಡುಗಡೆಯಾಗಿರುವ ರೂ. 52.50 ಲಕ್ಷಗಳಿಗೆ ಉಪಯುಕ್ತತಾ ಪ್ರಮಾಣ ಪತ್ರವನ್ನು ಲಗತ್ತಿಸಿ ಕಳುಹಿಸಿದ್ದಾರೆ.

ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 114 ಎಸ್‌ಜಿಎಫ್ 2009, ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ 2010**

ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂರವರು ಪ್ರಸ್ತಾವನೆಯಲ್ಲಿ ಕೋರಿರುವಂತೆ ಕರ್ನಾಟಕ ಸಕ್ಕರೆ ಸಂಸ್ಥೆಯ ಆಡಳಿತ ಕಛೇರಿ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲು ಹಾಗೂ ಆಡಳಿತ ವೆಚ್ಚ, ತರಬೇತಿ, ಕಾರ್ಯಗಾರ ಮುಂತಾದ ಕಾರ್ಯಕ್ರಮ ಕೈಗೊಳ್ಳಲು ಈ ಸಂಸ್ಥೆಗೆ 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2852–08–201–0–04–059(ಯೋಜನೆ)ರಡಿ ಒದಗಿಸಲಾಗಿರುವ ರೂ. 170 ಲಕ್ಷಗಳಲ್ಲಿ, ರೂ. 17.50 ಲಕ್ಷಗಳನ್ನು (ಹದಿನೇಳು ಲಕ್ಷದ ಐವತ್ತು ಸಾವಿರ ರೂ.ಗಳು ಮಾತ್ರ) ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ. ಹಣವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಮಾತ್ರ ಖರ್ಚು/ಬಿಡುಗಡೆ ಮಾಡತಕ್ಕದ್ದು ಮತ್ತು ಹಣ ಬಳಕೆ ಪ್ರಮಾಣ ಪತ್ರವನ್ನು ಸಹ ತಪ್ಪದೇ ಸರ್ಕಾರಕ್ಕೆ ಕಳುಹಿಸುವುದು.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಇವರ ಮೇಲು ರುಜು ಪಡೆದು ಸದರಿ ಹಣವನ್ನು ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್ ಡಿ 186 Exp–1/2010, ದಿನಾಂಕ 04–02–2010ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಆರ್. 456**

(ಪಿ. ಆನಂದ್ ಕುಮಾರ್)
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

ಸಂಖ್ಯೆ : ಮೂಅಇ 43 ರಾರಾಹೆ 09 ದಿನಾಂಕ : 9–02–2010

### ತಿದ್ದುಪಡಿ ಆದೇಶ

ದಿನಾಂಕ 16–01–2010 ಸಂ.ಮೂಅಇ 43 ರಾರಾಹೆ 09ರ ಸರ್ಕಾರಿ ಆದೇಶ ಭಾಗದ ಮೊದಲನೇ ಪ್ಯಾರಾದ ಏಳನೇ ಸಾಲಿನಲ್ಲಿರುವ "ಮಾಡಿರುವ ರೂ. 30.00 ಕೋಟಿಗಳಿಂದ ಬಿಡುಗಡೆ ಮಾಡಲಾಗಿದೆ" ಎಂಬುದರ ಬದಲಾಗಿ "ಮಾಡಿರುವ ರೂ. 30.00 ಕೋಟಿಗಳಿಂದ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ರಾಮನಗರ ವಿಭಾಗ, ರಾಮನಗರ ಇವರು ಸವಿವರ ಸಾದಿಲ್ವಾರು ಬಿಲ್ಲಿನ ಮೂಲಕ ಸೆಳೆದು ಸಂಬಂಧಪಟ್ಟವರಿಗೆ ಖಜಾನೆ ಚೆಕ್ ಮೂಲಕ ಕೊಡತಕ್ಕದ್ದು" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಆದೇಶ ಭಾಗದ 2ನೇ ಪ್ಯಾರಾ ಕೈಬಿಡಲಾಗಿದೆ. ಆದೇಶ ಭಾಗದ 3ನೇ ಪ್ಯಾರಾವನ್ನು 2ನೇ ಪ್ಯಾರಾವೆಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 457

**(ಎನ್. ಮಂಜುಳ ಗೀತ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ